ಸದ್ಬೋಧ ಚಂದ್ರಿಕೆಯ
೨೫ನೇ ವರ್ಷ (ಆಂಗಿರಸ ಸಂವತ್ಸರ) ದ

## ಕಾಣಿಕೆಯ ಪುಸ್ತಕ

# ಪ್ರಾರಬ್ಧ ಪ್ರಹಾರ!

(ಐತಿಹಾಸಿಕ ಕಥೆ)



ಲೇಖಕ:— ನಾಗೇಶ.



ಪ್ರಕಾಶಕ:—

ಯ. ಗು. ಕುಲಕರ್ಣಿ,

ಸಂಪಾದಕ, ಸ. ಚ. ಆನಂದವನ.



೧೯೩೨ ಇಸವಿ

ಬೆಲೆ ೪ ಆಣೆ

# ಪ್ರಕಾಶಕರ ಸೂಚನೆ.

ಇದೊಂದು ಸುಮನೋಹರವಾದ ಕನ್ನಡಿಗರ ಐತಿಹಾಸಿಕ ಪುಟ್ಟ ಕಾದಂಬರಿಯು. ವಿಜಯನಗರದ ಸಮ್ರಾಟ್ ಬುಕ್ಕರಾಯನ ಕಾಲಕ್ಕೆ ಹಿಂದುಗಳ ಅಸ್ಥಿವೈರವನ್ನು ಬೆಳೆಯಿಸಿದ್ದ ಕಲಬುರ್ಗೆಯ ಮಹಮ್ಮದಶಹ ಬಾಮನಿಯು ದಕ್ಷಿಣದಲ್ಲಿಯ ಎಲ್ಲ ಕನ್ನಡ ಹಿಂದೂರಾಜ್ಯಗಳನ್ನು ಮುರಿಯಲೆತ್ನಿಸಿದನು. ಅದೇ ಕಾಲಕ್ಕೆ ರಾಜಾ ವಿನಾಯಕದೇವನು ತೆಲಂಗಣ ದೇಶದ ವೇಲಂ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಮಹಮ್ಮದಶಹನ ತಂದೆಯಾದ ಅಲ್ಲಾಉದ್ದೀನನು ಅನ್ಯಾಯದಿಂದ ತೆಗೆದುಕೊಂಡ ಕರ್ನಾಟಕ-ತೆಲಂಗಣಗಳೊಳಗಿನ ಕೆಲವು ಪ್ರಾಂತಗಳನ್ನು ಬಿಟ್ಟುಕೊಡಬೇಕೆಂದು ವಿಜಯನಗರ-ವೇಲಂ ಪಟ್ಟಣಗಳ ರಾಜರು ಮಹಮ್ಮದಶಹನನ್ನು ಕೇಳಹತ್ತಿದರು. ಕ್ರೂರನೂ, ಪರಧರ್ಮದ್ವೇಷಿಯೂ, ಧರ್ಮಾಂಧನೂ ಆದ ಮಹಮ್ಮದಶಹನು ಈ ಬಗ್ಗೆ ತನ್ನ ಮಾತೆಯಾದ ಮಲಿಕಾಜಹಾನಳ ಹಿತೋಕ್ತಿಯನ್ನು ಕೂಡ ಲಕ್ಷ್ಯಕ್ಕೆ ತರದೆ, ಕ್ಷುದ್ರನೆವವನ್ನು ಮುಂದೆ ಮಾಡಿ, ವೇಲಂಪಟ್ಟಣದ ಮೇಲೆ ದಂಡೆತ್ತಿ ಬಂದನು. ಕನ್ನಡಿಗರ ದುರ್ದೈವದಿಂದ ವೇಲಂಪಟ್ಟಣದ ಸೇನಾಪತಿ ವಿಕ್ರಮನಂಥ ಗೃಹಭೇದಿಗಳೂ, ಪರಸ್ತ್ರೀಹವ್ಯಾಸಿಗಳೂ, ದೇಶದ್ರೋಹ-ಧರ್ಮದ್ರೋಹ ಸ್ವಾಮಿದ್ರೋಹವನ್ನು ಮಾಡಲು ಹಿಂದುಮುಂದು ನೋಡದ ವ್ಯಕ್ತಿಗಳಿಗೆ ಕರ್ನಾಟಕದಲ್ಲಿ ಯಾವಾಗಲೂ ಕೊರತೆಯಿಲ್ಲ. ಪತಿವ್ರತಾ ಶಿರೋಮಣಿಯಾದ ವಿಮಲಾದೇವಿಯಂಥ ನಾರೀರತ್ನಗಳು ಎಂಥ ಪ್ರಸಂಗವೊದಗಿದರೂ ತಮ್ಮ ಶೀಲವನ್ನು ಕಾಯುವರೆಂಬದನ್ನು ನಮ್ಮ ಮಿತ್ರ "ನಾಗೇಶ"ರಾಯರು ಒಳ್ಳೇ ಸ್ಫೂರ್ತಿದಾಯಕವಾಗಿಯೂ, ಸದ್ಬೋಧಪೂರ್ಣವಾಗಿಯೂ ವಿವರಿಸಿರುವರು. ಕನ್ನಡಿಗರೆಲ್ಲರೂ ಈ ಚಿಕ್ಕ ಪುಸ್ತಕವನ್ನು ಒಮ್ಮೆಯಾದರೂ ಓದಿಯೇ ತೀರಬೇಕೆಂದು ನಮ್ಮ ಆಗ್ರಹದಬಿನ್ನಹವಿದೆ.

— ಪ್ರಕಾಶಕ.



# ಪ್ರಾರಬ್ಧ ಪ್ರಹಾರ!



**ಮಧು ತಿಷ್ಠತಿ ಜಿಹ್ವಾಗ್ರೇ ಹೃದಯೇತು ಹಾಲಾಹಲಂ**



ಹದಿನಾಲ್ಕನೆಯ ಶತಮಾನವು ಅರ್ಧಗಳೆದಿತ್ತು. ವಿಜಯನಗರದ ರಾಜ್ಯವು ಊರ್ಜಿತಾವಸ್ಥೆಯನ್ನೈದುತ್ತ ನಡೆದಿತ್ತು. ಯವನರಿಂದ ಅನೇಕ ಬಗೆಯ ಸಂಕಟಗಳನ್ನು ಅನುಭವಿಸಿದ ಹಿಂದುಗಳಿಗೆ ಈಗೀಗ ಸ್ವಾಸ್ಥ್ಯವು ಪ್ರಾಪ್ತವಾಗತೊಡಗಿತ್ತು. ಕರ್ನಾಟಕ ಸಾಮ್ರಾಜ್ಯದ ಸಮ್ರಾಟನಾದ ಬುಕ್ಕರಾಯನು ಅತ್ಯಂತ ಜಾಗ್ರತೆಯಿಂದ ರಾಜ್ಯಶಕಟವನ್ನು ಸಾಗಿಸಿದ್ದನು. ಆತ್ಮಶಕ್ತಿಯ ದಿವ್ಯತೇಜದಿಂದ ಬೆಳಗುತ್ತಲಿರುವ ವಿದ್ಯಾರಣ್ಯಮಂತ್ರಿಗಳ ಬುದ್ಧಿಬಲದಿಂದಲೂ, ಮುದ್ದಣ ಸೇನಾಪತಿಯ ಅದ್ವಿತೀಯ ಪರಾಕ್ರಮದಿಂದಲೂ ಕನ್ನಡಿಗರಲ್ಲಿ ನವಚೈತನ್ಯವುಂಟಾಗಿ, ಅವರು ಪ್ರತಿಪಕ್ಷಿಗಳಾದ ಯವನರಿಗೆ ಅಜಿಂಕ್ಯರಾಗತೊಡಗಿದ್ದರು. ಸ್ವದೇಶ, ಸ್ವಧರ್ಮ, ಸ್ವಜನ ಮೊದಲಾದವುಗಳ ಬಗ್ಗೆ ಜನರಲ್ಲಿ ಅಭಿಮಾನವು ಬೆಳೆಯತೊಡಗಿತ್ತು. ಕರ್ನಾಟಕ, ತೆಲಂಗಣ ಮೊದಲಾದ ಹಿಂದುರಾಜರು ಐಕ್ಯದಿಂದ ನಡೆಯತೊಡಗಿದ್ದರು. ಅದು ರಾಷ್ಟ್ರದ ಏಳ್ಗೆಯ ಕಾಲವಾಗಿತ್ತು; ಹಿಂದುಗಳ ಅಭಿಮಾನದ ಕಾಲವಾಗಿತ್ತು; ಕನ್ನಡಿಗರ ವಿಕ್ರಮವನ್ನು ದಿಗಂತವಾಗಿ ಖ್ಯಾತಿಗೊಳಿಸುವ ಕಾಲವಾಗಿತ್ತು; ಕರ್ನಾಟಕ ಸಾಮ್ರಾಜ್ಯದ ಯಶೋದುಂದುಭಿಯು ಆಸೇತು-ಹಿಮಾಚಲದ ವರೆಗೆ ಮೊಳಗುವ ಕಾಲವಾಗಿತ್ತು; ಕರ್ನಾಟಕ ಸ್ವರಾಜ್ಯಸೂರ್ಯನ ಪ್ರಕಾಶವು ಅರಿಗಳ ಕಣ್ಣು ಕುಕ್ಕಿಸುವ ಕಾಲವಾಗಿತ್ತು! ಪ್ರಾರಬ್ಧಪ್ರಹಾರದಿಂದ ಅಂತಹ ಕಾಲಕ್ಕೆ ಎರವಾದ ಕನ್ನಡಿಗರಿಗೆ ಪುನಃ ಆ ಸುದಿನವು ದೊರೆಯಲಿಕ್ಕಿಲ್ಲವೇನು?

ಬಾಮನೀ ರಾಜ್ಯಸಂಸ್ಥಾಪಕನಾದ ಅಲ್ಲಾಉದ್ದೀನನು ಮರಣಹೊಂದಿದ್ದನು. ಅವನ ಎರಡನೆಯ ಮಗನಾದ ಮಹಮ್ಮದಶಹನು ಈ ಬಗೆಯ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದನು. ಅವನು ಶೂರನೂ, ಮಹತ್ವಾಕಾಂಕ್ಷಿಯೂ ಪರಧರ್ಮ ದ್ವೇಷಿಯೂ ಆಗಿದ್ದನು. ಹಿಂದೂ ಅರಸರ ಏಳ್ಗೆಯು ಅವನಿಗೆ ಸಹಿಸುತ್ತಿರಲಿಲ್ಲ. ಕರ್ನಾಟಕ, ತೆಲಂಗಣ ಮೊದಲಾದ ಹಿಂದೂರಾಜ್ಯಗಳನ್ನು ಮುರಿದು, ಸರ್ವತ್ರ ಮುಹಮ್ಮದೀಯ ಧರ್ಮವನ್ನು ಹಬ್ಬಿಸಬೇಕೆಂದು ಅವನು ನಿಶ್ಚಯಿಸಿಕೊಂಡಿದ್ದನು. ಹಿಂದೂದೇಶವು ಯವನರ ಕೈಯಲ್ಲಿಯೇ ಇರತಕ್ಕದ್ದೆಂದೂ, ಹಿಂದುಗಳು ಅವರ ಗುಲಾಮರೆಂದೂ ತಿಳಿಯುವ ಜನರಲ್ಲಿ ಮುಹಮ್ಮದಶಹನು ಅಗ್ರೇಸರನಿದ್ದನು. ತನ್ನ ಮಾನ ಮರ್ಯಾದೆಗಳಿಗೂ, ಅಧಿಕಾರಕ್ಕೂ ತಿಲಾಂಶವಾದರೂ ಭಂಗ ಬರುವದನ್ನು ಅವನು ಸಹಿಸುವಂಥವನಿದ್ದಿಲ್ಲ. ಕ್ರೂರನೂ, ಸಂತಾಪಿಯೂ ಆದ ಇವನು ಸಣ್ಣ ಸಣ್ಣ ನಿಮಿತ್ಯಗಳ ಸಲುವಾಗಿ ಆಕಾಶ-ಪಾತಾಳಗಳನ್ನೊಂದು ಮಾಡಿ ಬಿಡುತ್ತಿದ್ದನು.

ವೇಲಮ್ ಪಟ್ಟಣದ ರಾಜಕುಮಾರನಾದ ವಿನಾಯಕದೇವನು ಸ್ವಾಭಿಮಾನಿಯೂ ರಾಷ್ಟ್ರಪ್ರೇಮಿಯೂ ಆಗಿದ್ದನು. ನೀಚಸ್ವಾರ್ಥಿಯಾದ ಮುಹಮ್ಮದಶಹನ ವರ್ತನಕ್ಕೆ ಬುಕ್ಕರಾಯನಂತೆ ಇವನಾದರೂ ಹೇಸಿಕೊಂಡಿದ್ದನು. ಅವನ ಅಧ್ಯಕ್ಷತೆಯನ್ನು ನಡೆಯಗೊಡಬಾರದೆಂದು ಇವನು ಶಕ್ತಿಮೀರಿ ಯತ್ನಿಸುತ್ತಿದ್ದನು. ಇವನೂ ಬುಕ್ಕರಾಯನೂ ಒಕ್ಕಟ್ಟಿನಿಂದ ನಡೆದು, ಬಹಾಮನೀ ಸಿಂಹಾಸನದ ಉಚ್ಚಾಟನೆ ಮಾಡಬೇಕೆಂದು ನಿರ್ಧರಿಸಿಕೊಂಡಿದ್ದರು.

ಬಹಾಮನೀ ಅರಸರ ಚತುಷ್ಕೋಣಾಕೃತಿಯ ನಾಣ್ಯಗಳು ಆಗ ಕರ್ನಾಟಕದಲ್ಲಿಯೂ ತೆಲಂಗಣದಲ್ಲಿಯೂ ಬಳಿಕೆಯಲ್ಲಿದ್ದವು. ಸ್ವರಾಜ್ಯದಲ್ಲಿ ಪರಕೀಯ ಅರಸರ ನಾಣ್ಯಗಳು ನಡೆಯಿಸಲ್ಪಡುವದು ಬುಕ್ಕರಾಯ-ವಿನಾಯಕದೇವರ ಮನಸ್ಸಿಗೆ ಬರಲಿಲ್ಲ. ಅವರು ಅವುಗಳನ್ನು ಕರಗಿಸುವ ಕಾರ್ಯ ನಡೆಯಿಸಿದರು. ವಿನಾಯಕದೇವನು ಬಹಾಮನೀ ನಾಣ್ಯಗಳನ್ನು ನಿಶ್ಶೇಷ ಮಾಡಿಬಿಡಬೇಕೆಂದು ಟೊಂಕಕಟ್ಟಿದನು. ತನ್ನ ರಾಜ್ಯದೊಳಗಿನ ಧನಿಕರಿಗೆ ಸಹ ಈ ನಾಣ್ಯಗಳನ್ನು ಕರಗಿಸುವದಕ್ಕಾಗಿ ಆಜ್ಞೆ ಮಾಡಿದನು.

ರಾಮದೇವನು ವೇಲಂ ಪಟ್ಟಣದಲ್ಲಿಯ ಪ್ರಸಿದ್ಧನಾದ ಧನಾಢ್ಯನು. ಸ್ವದೇಶದ ನಾಣ್ಯಗಳನ್ನು ಕೊಟ್ಟು ಬಾಮನೀ ನಾಣ್ಯಗಳನ್ನು ಕೊಂಡು, ಅವುಗಳನ್ನು ಕರಗಿಸುವದಕ್ಕೆ ವಿನಾಯಕದೇವನು ಅವನಿಗೆ ಹೇಳಿದ್ದನು. ರಾಮದೇವನು ಸ್ವಾಭಿಮಾನಿಯಾಗಿದ್ದರೂ, ಬಲಾಢ್ಯನಾದ ಮುಹಮ್ಮದಶಹನೊಡನೆ ಈ ಪ್ರಕಾರದ ವಿರೋಧ ಬಳಿಸಲಿಕ್ಕೆ ಅಂಜುತ್ತಲಿದ್ದನು. ಬಹಾಮನೀ ರಾಜ್ಯದ

ವಕೀಲನ ಅಪಮಾನ ಮಾಡಿದ ನಿಮಿತ್ತದಿಂದ ಸುಲತಾನನು ಹಿಂದೆಯೊಮ್ಮೆ ಇವನ ಸ್ವತ್ತನ್ನೆಲ್ಲ ಸೆಳೆದೊಯ್ದಿದ್ದನು. ಈಗ ನಾಣ್ಯ ಕರಗಿಸುವ ಹವ್ಯಾಸಕ್ಕೆ ತೊಡಗಿದರೆ, ಮತ್ತೆ ಅದೇ ಪ್ರಸಂಗವು ಬರುವದೆಂದು ರಾಮದೇವನ ಮನಸ್ಸು ಹಿಂಜರಿಯತೊಡಗಿತ್ತು.

"ರಾಮದೇವಾ, ನಿನ್ನಂಥ ಸ್ವದೇಶಾಭಿಮಾನಿಯು ಈ ಕಾರ್ಯವನ್ನು ಕೈಕೊಳ್ಳುವದಕ್ಕೆ ಹಿಂಜರಿಯುವದನ್ನು ನೋಡಿ ನನಗೆ ಆಶ್ಚರ್ಯವೆನಿಸುತ್ತದೆ. ಧನಾಢ್ಯರಾದ ನಿಮ್ಮಂಥವರು ಕೈಗೊಡದಿದ್ದರೆ ಈ ಕಾರ್ಯವು ಹೇಗೆ ನೆರವೇರಬೇಕು? ಬಹಾಮನೀ ರಾಜ್ಯದೊಳಗಿನ ನಾಣ್ಯಗಳು ನಮ್ಮ ರಾಜ್ಯದಲ್ಲಿ ಬಳಿಸಲ್ಪಡುವದು ನಿನಗೆ ಸಮಂಜಸವೆನಿಸುವದೋ ಹೇಗೆ? ಕರ್ನಾಟಕದಲ್ಲಾದರೂ ನಾಣ್ಯ ಕರಗಿಸುವ ಕಾರ್ಯವು ನಡೆದಿರುವದೆಂದು ಕೇಳಿರುವೆನು. ಅರಸರ ಬೆಂಬಲವಿದ್ದ ಮೇಲೆ ಎಂಥ ಕಾರ್ಯಗಳನ್ನಾದರೂ ಮಾಡಬಹುದು. ನೀನು ರಾಜಕುಮಾರರ ಅಜ್ಞೆಯನ್ನು ಅಲ್ಲಗಳೆಯಬೇಡ."

ರಾಮದೇವನು ತನ್ನ ದಿವಾಣಖಾನೆಯಲ್ಲಿ ಕುಳಿತಿದ್ದನು. ಬಾಲ್ಯಸ್ನೇಹಿತನಾದ ವಿಕ್ರಮದೇವನು ಅವನ ಬಳಿಯಲ್ಲಿಯೇ ಕೋಚಿಗೆ ಮಂಡಿಸಿದ್ದನು. ರಾಮದೇವನ ಪತ್ನಿಯಾದ ವಿಮಲಾದೇವಿಯು ಅವರ ಭಾಷಣವನ್ನು ಕೇಳುತ್ತ ಸಮ್ಮುಖದಲ್ಲಿ ಕುಳಿತುಕೊಂಡಿದ್ದಳು. ರಾಮದೇವ-ವಿಕ್ರಮರಲ್ಲಿ ಅತ್ಯಂತವಾದ ಸ್ನೇಹವಿದ್ದುದರಿಂದ, ಪ್ರತಿಯೊಂದು ಕಾರ್ಯವನ್ನು ಪರಸ್ಪರರು ಕಿವಿಯ ಮೇಲೆ ಹಾಕದೆ ಮಾಡುತ್ತಿದ್ದಿಲ್ಲ. ವಿಕ್ರಮನು ತೆಲಂಗೀ ದಳದೊಳಗಿನ ಒಂದು ಪಥಕದ ಸೇನಾನಿಯಾಗಿದ್ದು, ಹೆಸರಿಗೆ ತಕ್ಕಂತೆ ವಿಕ್ರಮಶಾಲಿಯಾಗಿದ್ದನು. ಬಾಮನೀ ನಾಣ್ಯಗಳನ್ನು ಕರಗಿಸುವದಕ್ಕಾಗಿ ರಾಜಕುಮಾರನಾದ ವಿನಾಯಕದೇವನು ತನಗೆ ಆಜ್ಞಾಪಿಸಿದ ಬಗ್ಗೆ ರಾಮದೇವನು ಹೇಳಲು, ವಿಕ್ರಮದೇವನು ಮೇಲಿನಂತೆ ನುಡಿದನು.

"ವಿಕ್ರಮಾ, ನನ್ನಲ್ಲಿ ಸ್ವಾಭಿಮಾನವಿಲ್ಲೆಂದು ತಿಳಿಯುತ್ತಿರುವಿಯೇನು? ಸುಲತಾನ ಶಾಹಿಯೊಡನೆ ಅಸ್ಥಿವೈರವನ್ನು ಬಳೆಯಿಸುವವರ ಮಾಲಿಕೆಯೊಳಗಿನವನು ನಾನಿರುವೆನು. ಯವನರೆಂದರೆ, ನನ್ನ ಆಪಾದ-ಮಸ್ತಕ ಪರ್ಯಂತರವಾಗಿ ಉರಿಯುತ್ತದೆ; ಆದರೆ ಮಾಡಲೇನು? ನಮ್ಮವರು ದೇಶದ್ರೋಹಿಗಳೂ, ಸ್ವಜನ ಹಿತಶತ್ರುಗಳೂ, ರಾಷ್ಟ್ರಧರ್ಮವಿಹೀನರೂ ಇರುವರು. ಅರಸು-ಅರಸುಗಳಲ್ಲಿ ಐಕ್ಯವಿಲ್ಲ; ಹಿಂದು-ಹಿಂದುಗಳಲ್ಲಿ ಸಹಾನುಭೂತಿಯಿಲ್ಲ. ಸ್ವಾರ್ಥದ ಮುಂದೆ ನಮ್ಮ ಜನರಿಗೆ ಎಲ್ಲ ಧರ್ಮಗಳೂ ಹೇಯವಾಗಿ ತೋರುತ್ತವೆ. ಮುಹಮ್ಮದಶಹನ ವಕೀಲನು ಇಲ್ಲಿಗೆ ಬಂದಾಗ ಹಿಂದುಗಳ ಅಭಿಮಾನ

ರಕ್ಷಣೆಗಾಗಿ ನಾನಾಡಿದ ಮಾತುಗಳಿಂದ ಎಂಥ ಫಲವು ದೊರೆಯಿತೆಂಬದು ನಿನಗೆ ಗೊತ್ತಿದೆ. ಇವನ ತಂದೆಯಾದ ಅಲ್ಲಾವುದ್ದೀನನಿಗೆ ಹಿಂದುಗಳು ಸಹಾಯ ಮಾಡಿ ಕೆಟ್ಟರು! ಮುಮ್ಮದತಘಲಖನು ದೂರಿನ ಶತ್ರುವಾಗಿದ್ದನು. ಬಾಮನೀ ಬಾದಶಹರು ತೀರ ಸಮೀಪದ ಶತ್ರುಗಳಾದ್ದರಿಂದ, ಇವರ ಉಪಟಳವನ್ನು ಸಹಿಸುವದು ಅಸಾಧ್ಯವಿರುವದು. ಅಲ್ಲಾವುದ್ದೀನನು ತೆಗೆದುಕೊಂಡ ತೆಲಂಗಣದೊಳಗಿನ ಪ್ರಾಂತಗಳನ್ನು ತಿರುಗಿ ಕೊಡಬೇಕೆಂದು ವಿನಾಯಕದೇವನು ಸೂಚಿಸಿದನಷ್ಟೇ? ಅದೇ ಮಾತನ್ನು ಪುಷ್ಟೀಕರಿಸಿ, ನಾನು ಎರಡು ಮಾತನಾಡಿದೆನು; ಅದಕ್ಕಾಗಿ ಮದಾಂಧನಾದ ಯುವನ ವಕೀಲನು ನನ್ನನ್ನು ಹೀಯಾಳಿಸಿದ್ದರಿಂದಲೇ ನಾನು ಅವನ ಮಾನಖಂಡನೆ ಮಾಡಿದೆನು. ಇಷ್ಟು ಅಪರಾಧದ ಪ್ರತಿಫಲವು ಯಾವ ರೀತಿಯಿಂದ ದೊರೆಯಿತೆಂಬದು ನಿನಗೆ ಗೊತ್ತೇ ಇರುವದು. ರಾಜರೆನಿಸಿಕೊಳ್ಳುವವರಾದ ಈ ಜನರು ಕಾಣಿಕೆಯನ್ನಿತ್ತು ದಾಟಿಕೊಳ್ಳುತ್ತಾರೆ; ಆದರೆ ಅನಾಥರಾದ ನಾವು ನಮ್ಮ ಸರ್ವಸ್ವವನ್ನೂ ನಾಶ ಮಾಡಿಕೊಳ್ಳಬೇಕಾಗುತ್ತದೆ. ಅಂತೆಯೇ ನಾನು ಈ ಕಾರ್ಯದಲ್ಲಿ ಕೈಹಾಕುವದಕ್ಕೆ ಸಂದೇಹಬಡುತ್ತೇನೆ. ವಿಕ್ರಮಾ, ನನ್ನ ಮನಸ್ಸಿನಲ್ಲಿ ಹುಟ್ಟಿದ ಅಂಜಿಕೆಯಿಂದ ನನಗೆ ಸ್ವಾಭಿಮಾನ ಶೂನ್ಯನೆಂದು ದೋಷವಿಡಿಯುವಿಯೇನು?''

''ದೋಷವಿಡಿಯುವದಕ್ಕೆ ನೀವು ಮಾಡಿದ ಅಪರಾಧವೇನು? ಮುಹಮ್ಮದಶಹನು ನಮ್ಮ ಮನೆಯನ್ನು ಸುಲಿದುಕೊಂಡು ಹೋದ ಮೇಲೆ ರಾಜಕುಮಾರನು ತಿಲಾಂಶವಾದರೂ ನಮ್ಮ ಯೋಗಕ್ಷೇಮವನ್ನು ವಿಚಾರಿಸಲಿಲ್ಲ. ಎರಡನೆಯವರನ್ನು ಗಂಡಾಂತರದಲ್ಲಿ ಕೆಡಹಿ, ವಿನೋದಪಡೆಯುವದು ವಿನಾಯಕದೇವನ ನೈಸರ್ಗಿಕ ಗುಣವೆಂಬಂತೆ ಕಾಣುತ್ತದೆ. ನಾವು ಈಗೀಗ ನಾಲ್ಕು ಜನರಲ್ಲಿ ಉಂಡುಟ್ಟು ಸುಖದಿಂದ ಕಾಲ ಕಳೆಯತೊಡಗಿರುವೆವು. ಇಂಥ ಸಮಯದಲ್ಲಿ ರಾಜಕೀಯ ಉಪಾಧಿಯನ್ನು ಹಚ್ಚಿಕೊಳ್ಳುವದು ನನ್ನ ಮನಸ್ಸಿಗೇಕೋ ಪ್ರಶಸ್ತವೆನಿಸಲೊಲ್ಲದು'' ಎಂದು ವಿಮಲಾದೇವಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು.

''ರಾಮದೇವಾ, ರಾಜಕುಮಾರನಲ್ಲಿ ಸ್ವಾಭಿಮಾನವು ಸದೈವಜಾಗೃತವಿರುವದು. ಸ್ವಂತದ ದೈನ್ಯಾವಸ್ಥೆಗಾಗಿ ಎರಡನೆಯವರ ಆಶ್ರಯವನ್ನು ಬಯಸುವವನು ನೀನಲ್ಲವೆಂಬದು ರಾಜಕುಮಾರನಿಗೆ ಗೊತ್ತಿದ್ದುದರಿಂದ, ಅವನು ಸ್ವಾವಲಂಬಿಯಾದ ನಿನಗೆ ಯಾವ ಬಗೆಯ ಸಹಾಯ ಮಾಡಲಿಲ್ಲವೆಂಬದು ನಿಜವಿರುವದು. ಅನ್ಯಾಶ್ರಯವನ್ನು ಅಪೇಕ್ಷಿಸದೆ ಸ್ವಂತ ಕರ್ತವ್ಯಪ್ರಭಾವದಿಂದ ಮೊದಲಿನಂತೆ ಸಂಪನ್ನನಾದುದನ್ನು ನೋಡಿ, ರಾಜಕುಮಾರನು ಯಾವಾಗಲೂ

ನಿನ್ನನ್ನು ವರ್ಣಿಸುತ್ತಿರುವನು. ವಿಮಲಾದೇವಿಯವರೇ, ರಾಜಕಾರಣದಲ್ಲಿ ನಿಮ್ಮಂಥ ಸ್ತ್ರೀಯರಿಗೆ ಹೇಗೆ ತಿಳಿದೀತು! ನಿಮ್ಮ ಅಭಿಪ್ರಾಯವು ನಿಮ್ಮಷ್ಟಕ್ಕೆ ಸಮಂಜಸವೆನಿಸುತ್ತಿರಬಹುದು; ಆದರೆ ಸದ್ಯದ ಅಲ್ಲೋಲ ಕಲ್ಲೋಲ ವಾತಾವರಣದಲ್ಲಿ ಒಳ್ಳೆಯ ಧೋರಣದಿಂದ ನಡೆಯಬೇಕಾಗಿರುವದು. ರಾಮದೇವನಂಥ ಸ್ವದೇಶಾಭಿಮಾನಿಗಳು ಈ ಕಾರ್ಯವನ್ನು ಕೈಕೊಳ್ಳಲೇಬೇಕು. ಬುಕ್ಕರಾಯನಾದರೂ ತನ್ನ ರಾಜ್ಯದಲ್ಲಿ ಈ ವ್ಯವಸಾಯವನ್ನು ಬೇಗನೆ ಪ್ರಾರಂಭಿಸುವ ಸಂಭವವಿದೆ. ಕರ್ನಾಟಕ-ತೆಲಂಗಣ ರಾಜ್ಯಗಳು ಒಂದಾದ ಮೇಲೆ, ಬಾಮನೀ ಬಾದಶಹನೆಂದರೆ ಎಷ್ಟರವನು?''

''ಆಗಲಿ; ರಾಜಾಜ್ಞೆಯನ್ನು ಮೀರಿದ ದೋಷವನ್ನಾದರೂ ಏಕೆ ತೆಗೆದುಕೊಳ್ಳಲಿ? ದೇಶಕಾರ್ಯವನ್ನು ಮಾಡುವಾಗ ನನ್ನ ಸರ್ವಸ್ವವು ನಾಶವಾದರೂ ಅದರ ಪರಿವೆಯು ನನಗಿಲ್ಲ. ಬಹಾಮನೀಶಹನ ನಾಣ್ಯಗಳನ್ನು ಕರಗಿಸುವದೆಂದರೆ, ಅವನಿಗೆ ಸಂಗ್ರಾಮಕ್ಕೆ ಔತಣವಿತ್ತಂತೆಯೇ ಸರಿ. ಹೇಗಾದರೂ ಕರ್ನಾಟಕ-ತೆಲಂಗಣ ರಾಜ್ಯಗಳು ಒಂದಾಗಿರುವವು. ಒಕ್ಕಟ್ಟಿನಿಂದ ಕಾದಿ ಯವನ ರಾಜಶಕ್ತಿಯ ಉಚ್ಚಾಟನೆ ಮಾಡಿದರೆ ಸಾಕು.''

ರಾಮದೇವನ ಮಾತುಗಳನ್ನು ಕೇಳಿ, ವಿಮಲಾದೇವಿಯ ಹೃದಯವು ತಳಮಳಗೊಂಡಿತು. ತನ್ನ ಮಾತಿಗೆ ಒಪ್ಪಿದ್ದನ್ನು ನೋಡಿ ವಿಕ್ರಮನ ಮುಖವು ವಿಜಯಾನಂದದಿಂದ ಪ್ರಫುಲ್ಲಿತವಾಯಿತು. ಬಹಾಮನೀನಾಣ್ಯಗಳನ್ನು ಕರಗಿಸುವದರಿಂದ ಪತಿಯು ಗಂಡಾಂತರಕ್ಕೊಳಗಾಗುವನೆಂಬ ಭಯದಿಂದ ವಿಮಲಾದೇವಿಯು ದುಃಖಿತಳಾದದ್ದು ಸ್ವಾಭಾವಿಕವು. ಇದೇ ಸಂಗತಿಯಿಂದ ವಿಕ್ರಮದೇವನು ಯಾವದೋ ಮಹತ್ಕಾರ್ಯವನ್ನು ಈಡೇರಿಸಿ ಕೃತಕೃತ್ಯನಾದಂತೆ, ಹರುಷಾಬ್ಧಿಯಲ್ಲೇಕೆ ಮುಳುಗಿದನೆಂಬದು ಪ್ರಸಂಗಾನುಸಾರವಾಗಿ ತಿಳಿಯುವದು. ''ಮಧು ತಿಷ್ಠತಿ ಜಿಹ್ವಾಗ್ರೇ ಹೃದಯೇತು ಹಾಲಾಹಲಂ'' ಎಂಬಂತೆ ವಿಕ್ರಮನ ವೃತ್ತಿಯಿತ್ತೆಂದು ಮಾತ್ರ ಹೇಳದಿರಲಾರೆವು.

## ಮನಸ್ಸಿನ ನಿರ್ಧಾರ.

ಕೃಷ್ಣಸುಂದರಿಯು ಅದೇ ಯೌವನಪ್ರದೇಶದಲ್ಲಿ ಪದಾರ್ಪಣ ಮಾಡಿದ್ದಳು. ಸರ್ವಾಂಗ ಸುಂದರಿಯೂ, ಗುಣನಿಧಿಯೂ ಆದ ಇವಳು ಒಬ್ಬ ಸಾಮಾನ್ಯ ಸರದಾರನ ಪುತ್ರಿಯಾಗಿದ್ದರೂ ದೊಡ್ಡ ದೊಡ್ಡ ರಾಜಕುಮಾರರ ಮನಸ್ಸನ್ನು ಸಹಜವಾಗಿ ಆಕರ್ಷಿಸುವಷ್ಟು ಮನೋಹರಳಾಗಿದ್ದಳು. ಇವಳ ಸ್ವಗೀಯ

ಸೌಂದರ್ಯವನ್ನು ನೋಡಿ, ವೇಲಂ ಪಟ್ಟಣದ ರಾಜಕುಮಾರನಾದ ವಿನಾಯಕ ದೇವನು ಆ ಮೋಹನಾಂಗಿಯಲ್ಲಿ ಪ್ರೇಮವುಳ್ಳವನಾದುದರಲ್ಲಿ ಆಶ್ಚರ್ಯವಿಲ್ಲ. ಕೃಷ್ಣಸುಂದರಿಯ ಪ್ರಾಪ್ತಿಗಾಗಿ ಅವನು ಒಳ್ಳೆಯ ಸಾಹಸವನ್ನು ನಡೆಯಿಸಿದ್ದನು. ರಾಜಕುಮಾರನಾದ ತನ್ನನ್ನು ವರಿಸುವದಕ್ಕೆ ಆ ಲಲನೆಯು ಆನಂದದಿಂದ ಸಮ್ಮತಿಸುವಳೆಂಬ ಅವನ ಭ್ರಾಮಕ ಕಲ್ಪನೆಯು ಈಗ ಅಲ್ಪ ಸ್ವಲ್ಪ ಬಯಲಾದಂತಾದ್ದರಿಂದ, ಯಾವ ಬಗೆಯ ಸಂಧಾನದಿಂದಲಾದರೂ ಕಾರ್ಯಭಾಗವಾದರಾಯಿತೆಂದು ತಿಳಿದಿದ್ದನು. ವಿಕ್ರಮನಿಗೂ ಕೃಷ್ಣಸುಂದರಿಯ ತಂದೆಯಾದ ಸೋಮಲದೇವನಿಗೂ ದೃಢತರವಾದ ಸ್ನೇಹವಿದ್ದುದರಿಂದ, ವಿಕ್ರಮನ ಮುಖಾಂತರವಾಗಿ ಈ ಕಾರ್ಯವನ್ನು ನೆರವೇರಿಸಿಕೊಳ್ಳಬೇಕೆಂದು ಅವನು ಯತ್ನಿಸಿದನು. ಹೇಗಾದರೂ ಮಾಡಿ ಕೃಷ್ಣಸುಂದರಿಯನ್ನು ರಾಜಕುಮಾರನಿಗೆ ಗಂಟುಹಾಕಿ ಶ್ರೇಯೋಭಾಗಿಯಾಗಬೇಕೆಂದು ವಿಕ್ರಮನಾದರೂ ಅವಳ ಮನವೊಲಿಸುವದಕ್ಕಾಗಿ ಅವ್ಯಾಹತ ಪ್ರಯತ್ನ ನಡೆಯಿಸಿದ್ದನು. ಅವನು ಸೋಮಲದೇವನನ್ನು ಬುದ್ಧಿಪೂರ್ವಕವಾಗಿ ವಿನಾಯಕದೇವನ ಮನೆಗೆ ಕರೆತಂದಿದ್ದನು.

ವೇಲಂ ಪಟ್ಟಣದ ಅರಮನೆಯು ಒಳ್ಳೆಯ ಮನೋಹರವಾಗಿ ಕಟ್ಟಲ್ಪಟ್ಟಿತ್ತು. ಅದು ಮೂರು ಅಂತಸ್ತಿನದಿದ್ದು, ಒಳ್ಳೆಯ ಕುಶಲರಾದ ಕೈಗಾರಿಕೆಯವರಿಂದ ಗೋಡೆಗಳ ಮೇಲೆಯೂ ಕಂಬ-ಬೋದುಗೆಗಳ ಮೇಲೆಯೂ ಸುಂ-ದರತರವಾದ ಚಿತ್ರಗಳು ಕೊರೆಯಲ್ಪಟ್ಟಿದ್ದವು. ಕಿಡಕಿಗಳಿಗೆ ಅನೇಕ ವರ್ಣದ ಕಾಜುಗಳನ್ನು ಕೂಡಿಸಿದ್ದರಿಂದ, ಅರಮನೆಯು ತುಂಬ ಅಂದವಾದ ಪ್ರಕಾಶವು ಬೀಳುತ್ತಿತ್ತು. ಎರಡನೆಯ ಅಂತಸ್ತಿನಲ್ಲಿ ವಿನಾಯಕದೇವನ ದಿವಾಣಖಾನೆಯಿದ್ದು, ಅಲ್ಲಿಯೇ ಅವನು ವಿಕ್ರಮ ಸೋಮಲದೇವರೊಡನೆ ಕೃಷ್ಣಸುಂದರಿಯ ಸಲುವಾಗಿ ಮಾತು-ಕಥೆಗಳನ್ನು ನಡೆಯಿಸಿದ್ದನು.

"ರಾಜಕುಮಾರರೇ, ತಮ್ಮ ಆಪ್ತತ್ವವಾಗುವದರಿಂದ ನನ್ನ ಮನೆತನವು ಒಳ್ಳೆಯ ಪ್ರತಿಷ್ಠೆಗೆ ಬರುವದೆಂದು ಸಂಭ್ರಮಗೊಂಡಿದ್ದೆನು; ಆದರೆ ಕೃಷ್ಣಸುಂದರಿಯು ಚಂಡಿತನದ ಸ್ವಭಾವದವಳಿರುವಳು. ನಾನೂ ವಿಕ್ರಮದೇವರೂ ಈ ವಿಷಯದಲ್ಲಿ ಅವಳಿಗೆ ಬಹು ಪರಿಯಾಗಿ ಹೇಳಿದರೂ ನಿರರ್ಥಕವಾಯಿತು. ಸಾಮಾನ್ಯ ತರಗತಿಯ ಜನರಿಗೆ ರಾಜಮನೆತನದ ಸಂಬಂಧವೇಕೆಂದು ಅವಳು ಆಡುತ್ತಿರುವಳು."

ಸೋಮಲದೇವನ ಮಾತುಗಳು ವಿನಾಯಕದೇವನ ಹೃದಯಕ್ಕೆ ಶಲ್ಯದಿಂದ ಚುಚ್ಚಿದಂತಾಗುತ್ತಿದ್ದವು. ಮುಖಮಂಡಲದಲ್ಲಿ ಔದಾಸೀನ್ಯದ ಕಳೆಯು ಸ್ಪಷ್ಟವಾಗತೊಡಗಿತ್ತು. ಅವನ ಮಾತಿಗೆ ಪ್ರತಿಯಾಗಿ ನುಡಿಯಲಿಕ್ಕೆ ಅವನ

ವಿಶಾಲವಾದ ಜ್ಞಾನಕೋಶದಲ್ಲಿ ಶಬ್ದಗಳೇ ದೊರೆಯದಾಗಿದ್ದವು. ಅವನು ದಿಙ್ಮೂಢನಾಗಿ ಮುಖವನ್ನು ತಗ್ಗಿಸಿಕೊಂಡು ಕುಳಿತದ್ದನ್ನು ನೋಡಿ, ಸೋಮಲ ದೇವನ ಮನಸ್ಸು ವ್ಯಾಕುಲಗೊಂಡಿತು. ನಿಗ್ರಹಾನುಗ್ರಹ ಶಕ್ತಿಯುಳ್ಳ ರಾಜ ಕುಮಾರನು ತನ್ನಂಥ ಸಾಧಾರಣಪ್ರತಿಯ ಮನುಷ್ಯನನ್ನು ಯಾಚಿಸುತ್ತಿರಲು, ಅವನ ಅಲ್ಪಯಾಚನೆಯನ್ನು ಪೂರ್ತಿಗೊಳಿಸುವ ಯೋಗವು ವ್ಯರ್ಥವಾಗುತ್ತಿರು ವದನ್ನು ನೋಡಿ, ಅವನು ತಲ್ಲಣಗೊಂಡನು. ಭಾವೀಮನೋಮಂದಿರವನ್ನು ಉಧ್ವಸ್ತ ಮಾಡಲೆಳಿಸಿದ ಮಗಳ ಅವಿಚಾರಿತನಕ್ಕೆ ಅವನು ಖತಿಗೊಂಡನು.

"ರಾಜಕುಮಾರರೇ, ಹುಡುಗಿಗೆ ಇನ್ನೂ ವ್ಯವಹಾರ ಚಾತುರ್ಯವು ಗೊತ್ತಿರುವದಿಲ್ಲ. ಇಂದಿಲ್ಲದಿದ್ದರೆ ನಾಳೆಗಾದರೂ ಹಾದಿಗೆ ಬಂದಾಳು. ಈಗಾ ಗಲೇ ಭಗ್ನಮನೋರಥರಾಗುವ ಕಾರಣವಿಲ್ಲ."

ಮತ್ತೆ ಸೋಮಲದೇವನು ಹೀಗೆ ನುಡಿದೊಡನೆಯೆ ವಿನಾಯಕದೇವನ ಹೃದಯದ ನಿರಾಶಾಮರುಭೂಮಿಯಲ್ಲಿ ಅಲ್ಪ ಸ್ವಲ್ಪ ಆಶೆಯ ದ್ರವವು ಒಸರ ತೊಡಗಿತು. ಹೃದಯದಲ್ಲಿ ತರಂಗಿತವಾಗತೊಡಗಿದ ಆನಂದಲಹರಿಯಿಂದ ಮುಖಮಂಡಲವು ಪ್ರಫುಲ್ಲಿತವಾಯಿತು.

"ಸೋಮಲದೇವ, ಸ್ತ್ರೀಯರ ಮನಸ್ಸು ಚಂಚಲವಾದದ್ದಿರುತ್ತದೆ. ಸಾವಧಾನದಿಂದ ಕಾರ್ಯ ಸಾಧಿಸಿಕೊಳ್ಳದೆ, ಅವಸರ ಮಾಡಿದ್ದಕ್ಕೆ ಇದೀಗಿನ ನಿರಾಶಾಜನಕಪರಿಸ್ಥಿತಿಯು ಪ್ರಾಪ್ತವಾಯಿತು. ಸ್ತ್ರೀಯರಲ್ಲಿ ಲಜ್ಜಾ-ಭಯಗ ಳೆಂಬ ನೈಸರ್ಗಿಕಗುಣಗಳು ಸದೈವ ವಾಸಿಸುತ್ತಲಿರುವದರಿಂದ, ಅವರು ತಮ್ಮ ಮನೋಧರ್ಮಕ್ಕೆ ಸರಿಯಾಗಿ ಆಚರಿಸತಕ್ಕವರೇ."

"ರಾಜಕುಮಾರರೇ, ನಿಮ್ಮ ಅಭಿಪ್ರಾಯವು ಅಕ್ಷರಶಃ ನಿಜವಿರುವದು. ಪ್ರಣಯಿಗಳ ಪ್ರೇಮಮಿಲನವಾಗುವದಕ್ಕೆ ಅನ್ಯರ ಮಧ್ಯಸ್ಥಿಕೆಯ ಅವಶ್ಯಕತೆ ಯಿರುವದಿಲ್ಲ. ನಿತ್ಯ ಸಹವಾಸದಿಂದ ಅವರು ತಾವಾಗಿ ಪ್ರೇಮಬದ್ಧರಾಗುವರು. ನಡುವೆ ನಮ್ಮಂಥವರ ಪ್ರವೇಶವಾಗುವದರಿಂದ ಕಾರ್ಯವು ಕೆಟ್ಟು ಹೋಗು ವದು. ಈ ಉಪಾಯಕ್ಕೆ ಕೃಷ್ಣಸುಂದರಿಯು ಕೈಯಲ್ಲಿ ಬರದಿದ್ದರೆ, ಆಗ್ರಹ ದಿಂದ ಹೇಳಿ ಅವಳ ಮನಸ್ಸನ್ನು ತಿರುಗಿಸುವಷ್ಟು ಧೈರ್ಯವು ನನ್ನಲ್ಲಿದೆ. ನಾನು ಸುಳ್ಳು ಹೇಳಲಾರೆನು. ತಂದೆಯ ಆಜ್ಞೆಗಿಂತಲೂ ನನ್ನ ಆಜ್ಞೆಗೆ ಅವಳು ಹೆಚ್ಚಿನ ಮಾನ್ಯತೆ ಕೊಡುವಳು" ಎಂದು ವಿಕ್ರಮದೇವನು ಆತ್ಮೈಕ್ಯತೆಯಿಂದ ನುಡಿದನು.

ಸೋಮಲದೇವನ ಮನೋಮಂದಿರವು ಐದು ಅಂತಸ್ತು ಕಂಡಿದ್ದರೆ, ವಿಕ್ರಮದೇವನದು ಹನ್ನೊಂದು ನೆಲೆ ಕಂಡಿತ್ತು. ಅವನು ಮೇಲೆ ಮೇಲೆ ಪ್ರೌಢಿಮೆಯನ್ನು ತೋರಿಸುತ್ತಿದ್ದರೂ ಅಂತರಂಗವು ಸಂಶಯದಿಂದ ಹೊಯ್ದಾ

ಡತೊಡಗಿತ್ತು. ಕೃಷ್ಣಸುಂದರಿಯು ರಾಜಕುಮಾರನನ್ನು ತಿರಸ್ಕರಿಸುವದರ ಕಾರಣವು ವಿಕ್ರಮದೇವನಿಗೆ ಗೊತ್ತಾದ್ದರಿಂದ, ತನ್ನ ಪ್ರಯತ್ನವೆಲ್ಲಿ ನಿಷ್ಫಲವಾಗಿ, ದೊರೆಯುವ ಪ್ರತಿಫಲಕ್ಕೆಲ್ಲಿ ಅಡ್ಡಿ ಬರುವದೋ ಎಂದು ಭಯಗೊಂಡಿದ್ದನು.

“ವಿಕ್ರಮದೇವ, ತೆಲಂಗಣದ ಭಾವೀಸಾರ್ವಭೌಮನನ್ನು ವರಿಸಿ, ಮಹಾರಾಜ್ಞಿಯಾಗುವ ಭಾಗ್ಯವನ್ನು ತೃಣೀಕರಿಸುವ ಕೃಷ್ಣಸುಂದರಿಯು ಜಾಣಳೆಂದು ಹೇಗೆ ಅನ್ನಬೇಕು?”

“ಮಹಾರಾಜರೇ, ಸಾಮಾನ್ಯತರಹದವರು ದೊಡ್ಡ ಜನರೊಡನೆ ಶರೀರ ಸಂಬಂಧ ಮಾಡಿದರೆ, ಒಳಿತಾಗುವದಿಲ್ಲವೆಂಬ ಭ್ರಾಮಕವಿಚಾರವು ಅವಳಲ್ಲಿ ನೆಲೆಗೊಂಡಿರುವದು. ಚನ್ನಾಗಿ ತಿಳಿಸಿ ಹೇಳಿದರೆ, ತಾನಾಗಿ ಹಾದಿಗೆ ಹತ್ತುವಳು.”

ಸೋಮಲದೇವನ ಈ ಮಾತುಗಳಿಂದ ರಾಜಕುಮಾರನ ಮನಸ್ಸು ಎಷ್ಟರ ಮಟ್ಟಿಗೆ ಸಮಾಧಾನ ಹೊಂದಿತೆಂಬದು ಹೇಗೆ ಗೊತ್ತಾಗಬೇಕು? ಅವನು ವಿಚಾರ ತಂದ್ರಿಯಲ್ಲಿರಲು, ರಾಮದೇವನು ಅಲ್ಲಿಗೆ ಬಂದನು. ಅವನನ್ನು ನೋಡಿದ ಕೂಡಲೆ ರಾಜಕುಮಾರನ ಮನಸ್ಸಿನ ಲಹರಿಯು ಎರಡನೆಯ ಕಡೆಗೆ ಹೊರಳಿತು.

“ರಾಮದೇವ, ಕುಳಿತುಕೊಳ್ಳಿರಿ. ನಾನು ನಿಮಗೆ ವಹಿಸಿದ ಕಾರ್ಯಭಾರದ ಸಲುವಾಗಿ ನಿಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲವಲ್ಲ?” ಎಂದು ರಾಜಕುಮಾರನು ಉತ್ಕಂಠೆಯಿಂದ ಕೇಳಿದನು.

“ಮಹಾರಾಜರೇ, ತಮ್ಮಂಥಹರು ಅತ್ಯಲ್ಪಕಾರ್ಯವನ್ನು ಮಾಡ ಹೇಳಿದಾಗ, ಅದನ್ನು ತಿರಸ್ಕರಿಸುವಂಥ ನೀಚಕೋಟಿಯವನು ನಾನಲ್ಲ. ನೀವು ಹೇಳಿರುವ ಮಾತು ಕೇವಲ ನಿಮ್ಮ ಹಿತಕ್ಕಾಗಿ ಇರುವದಿಲ್ಲ; ರಾಷ್ಟ್ರದ ಅಭಿಮಾನವನ್ನು ಕಾಯುವಂತಹದಾಗಿರುವದು. ತೆಲಂಗಣ ರಾಜ್ಯದಲ್ಲಾಗಲಿ, ಕರ್ನಾಟಕ ಸಾಮ್ರಾಜ್ಯದಲ್ಲಾಗಲಿ ಇಲ್ಲವೆ ಬೇರೊಂದು ಹಿಂದುರಾಜ್ಯದಲ್ಲಾಗಲಿ ಬಾಮನಿ ಸುಲತಾನಶಾಹಿಯ ನಾಣ್ಯಗಳು ನಡೆಯುವದೆಂದರೆ, ನಮ್ಮ ಅಭಿಮಾನದ ಬೆಲೆ ಕಟ್ಟುವಂತಹ ಮಾತಾಗಿರುವದು ಹಿಂದು ರಾಜರಾದ ನೀವು ಒಕ್ಕಟ್ಟಿನಿಂದ ಈ ಕಾರ್ಯ ಮಾಡಿದರೆ, ಹಿಂದುಗಳಾದ ನಮ್ಮ ಗೌರವವು ಉಳಿಯುವದು. ಬಾಮನಿ ಸುಲತಾನನು ಬಲಾಢ್ಯನಿದ್ದುದರಿಂದ, ಈ ಕಾರ್ಯ ಮಾಡುವಾಗ ಹಿಂದುರಾಜಮಂಡಲವೆಲ್ಲ ಐಕ್ಯಭಾವನೆಯಿಂದ ನಡೆಯಬೇಕಾಗುವದು. ಇಲ್ಲದಿದ್ದರೆ ರಾಜರಾದ ನಿಮಗೂ,-ಪ್ರಜೆಗಳಾದ ನಮ್ಮಂತಹ ದೀನರಿಗೂ ಅನೇಕ ಬಗೆಯ ಸಂಕಟಗಳನ್ನು ಭೋಗಿಸುವ ಪ್ರಸಂಗವೊದಗುವದು.”

“ಈ ವಿಷಯದಲ್ಲಿ ಬುಕ್ಕರಾಯನಾದರೂ ಸಹಾನುಭೂತಿಯುಳ್ಳವನಾಗಿರುವನು. ನಮ್ಮ ಈ ಕೃತಿಯಿಂದ ಸುಲತಾನನು ಕ್ರುದ್ಧನಾಗಿ ದಂಡೆತ್ತಿ ಬಂದರೆ,

ವೈದ್ಯನು ಹೇಳಿದ್ದು ಹಾಲೋಗರ, ರೋಗಿಯು ಬಯಸಿದ್ದೂ ಹಾಲೋಗರ ಎಂಬಂತಾಗುವದು. ಹಿಂದುಗಳ ರಾಜ್ಯದಲ್ಲಿ ಸುಲ್ತಾನಶಾಹಿಯ ಆಜ್ಞೆಯನ್ನು ತಿಲಾಂಶವಾದರೂ ನಡೆಯಗೊಡಬಾರದೆಂದು ನನ್ನ ಸತ್ಯಸಂಕಲ್ಪವಿದೆ.''

ವಿನಾಯಕದೇವನು ಬಹಿರಂಗಕ್ಕಾಗಿ ಹೀಗೆ ಮಾತನಾಡುತ್ತಲಿರದೆ ಮನಃಪೂರ್ವಕವಾಗಿ ಆಡತೊಡಗಿದ್ದನು. ಯವನರ ಆಡಂಬರವು ತನ್ನ ರಾಜ್ಯದಲ್ಲಷ್ಟೇ ಏಕೆ? ಇನ್ನುಳಿದ ಹಿಂದೂ ರಾಜ್ಯಗಳಲ್ಲಿ ನಡೆಯಬಾರದೆಂದು ಅವನು ಇಚ್ಛಿಸುತ್ತಿದ್ದನು.

''ಒಂದು ವೇಳೆ ಮಹಮ್ಮದಶಹನು ದಂಡೆತ್ತಿ ಬಂದರೆ ಅವನ ಮದವನ್ನಿಳಿಸುವದಕ್ಕೆ ತೆಲಂಗಣದ ಸೇನೆಯು ಸದಾ ತತ್ಪರವಿರುತ್ತದೆ.'' ವಿಕ್ರಮದೇವನು ವಿಕ್ರಮದಿಂದ ಮಾತನಾಡುವದನ್ನು ಕೇಳಿ ರಾಮದೇವನ ಮನಸ್ಸಿಗೆ ಒಂದು ಬಗೆಯೆನಿಸಿತು. ಆಗ ಅವನು ಗಂಭೀರತೆಯಿಂದ:—

''ವಿಕ್ರಮದೇವ, ಮಹಮ್ಮದಶಹನೊಡನೆ ಕಾದುವದೆಂದರೆ ಮೊಲದ ಬೇಟೆಯೆಂದು ತಿಳಿದಿರುವೆಯೇನು? ಎಲ್ಲ ಹಿಂದು ಭೂಪಾಲರು ಒಕ್ಕಟ್ಟಾದರೆ ಮಾತ್ರ ಅವನು ಹಣ್ಣಾಗುವನು. ಕೇವಲ ತೆಲಂಗಣದ ಸೈನ್ಯಕ್ಕೆ ಸುಲತಾನನು ಅಜಿಂಕ್ಯನಿರುವನೆಂಬ ಮಾತನ್ನು ಮರೆಯತಕ್ಕದ್ದಲ್ಲ.''

''ರಾಮದೇವ, ನಿಮ್ಮ ಭಾಷಣವು ಯಥಾಯೋಗ್ಯವಾದದ್ದಿರುವದು. ನಮಗೆ ಮುಖ್ಯವಾಗಿ ವಿಜಯನಗರದ ಸಹಾಯವಂತೂ ಬೇಕೇಬೇಕು. ಅಲ್ಲದೆ, ದಕ್ಷಿಣದ ಎಲ್ಲ ಹಿಂದುರಾಜರನ್ನು ಸುಲತಾನಶಾಹಿಯ ವೈರ ಬಳೆಯಿಸುವದಕ್ಕೆ ಸಿದ್ಧರನ್ನಾಗಿ ಮಾಡಬೇಕು.'' ಹೀಗೆ ಸೋಮಲದೇವನು ತನ್ನ ಸರಳವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದನು.

ವಿನಾಯಕದೇವನ ಮನಸ್ಸು ಇತ್ತಂಡವಾಗಿತ್ತು. ಒಂದು ಕಡೆಯಲ್ಲಿ ಕೃಷ್ಣಸುಂದರಿಯು ಅವನ ಮನಸ್ಸನ್ನು ಸೆಳೆಯತೊಡಗಿದ್ದಳು; ಮತ್ತೊಂದು ಕಡೆಗೆ ದೇಶಾಭಿಮಾನದಿಂದ ಪ್ರವೃತ್ತವಾಗಿರುವ ಕಾರ್ಯಭಾರವೊಂದು ಜಗ್ಗಲಾರಂಭಿಸಿತ್ತು. ಹೀಗಾಗಿ ಅವನು ಒಳ್ಳೆಯ ಗೊಂದಲದಲ್ಲಿ ಬಿದ್ದನು. ದೇಶಕಾರ್ಯ ಮಾಡುವಾಗ ಕೇವಲ ವೈಷಯಿಕ ವ್ಯಾಮೋಹಕ್ಕೆ ಜೋತುಕೊಂಡು ಕುಳಿತುಕೊಳ್ಳುವಂಥ ಹೀನ ಕೋಟಿಯವನು ಅವನಾಗಿರದ್ದರಿಂದ ಹರಿದಾಡುವ ಮನಸ್ಸನ್ನು ಸ್ಥಿರಗೊಳಿಸಿ ಒಳ್ಳೆಯ ಗಾಂಭೀರ್ಯದಿಂದ:—

''ರಾಮದೇವ, ಯಾವ ಬಗೆಯ ಅಂಜಿಕೆಯನ್ನು ಮನಸ್ಸಿನಲ್ಲಿ ತರದೆ, ಸಾಣ್ಯಾ ಕರಗಿಸುವ ಕಾರ್ಯಕ್ಕೆ ನಾಳೆಗೇ ಪ್ರಾರಂಭಿಸಿರಿ. ಅದರ ಪರ್ಯವಸಾನವನ್ನು ಕಾಣಲಿಕ್ಕೆ ಈ ತೆಲಂಗಣದ ಸಾರ್ವಭೌಮನು ಸಿದ್ಧನಿರುವನು!''

## ಗುಪ್ತ ಲೇಖನ!

ಮುಹಮ್ಮದಶಹನು ಅದೇ ಕಲಬುರ್ಗೆಯ ಸಿಂಹಾಸನವನ್ನೇರಿದ್ದನು. ಬಹಾಮನೀ ರಾಜ್ಯದ ಪರಿಸ್ಥಿತಿಯು ಒಳ್ಳೆಯ ಕೀಳುತನದ್ದಾಗಿತ್ತು. ಭಾಂಡಾರದಲ್ಲಿ ಹಣದ ಕೊರತೆಯಿತ್ತು. ಅದೇ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡದ್ದರಿಂದ, ಅವನ ವರ್ಚಸ್ಸವು ದೇಶದಲ್ಲಿ ಚನ್ನಾಗಿ ಪ್ರಸ್ಥಾಪಿತವಾಗಿರಲಿಲ್ಲ. ಕೈ-ಕೆಳಗಿನ ಸರದಾರರ ಮೇಲೆ ನಂಬಿಗೆಯಿಟ್ಟು ಕೆಲಸ ಮಾಡುವಂತಿರಲಿಲ್ಲ. ಇವನು ಶೂರನೂ, ಮಹತ್ವಾಕಾಂಕ್ಷಿಯೂ ಇದ್ದು, ಈ ಗುಣಗಳ ಉಪಯೋಗವು ಆಗರವಷ್ಟಾದರೂ ಆಗುವಂತಿರಲಿಲ್ಲ.

ಅಲ್ಲಾವುದ್ದೀನನು ತೆಲಂಗಣ, ಕರ್ನಾಟಕದೊಳಗಿನ ಕೆಲವು ಪ್ರಾಂತಗಳನ್ನು ಗೆದ್ದುಕೊಂಡಿದ್ದನು. ಅನ್ಯಾಯದಿಂದ ತೆಗೆದುಕೊಂಡ ಪ್ರಾಂತಗಳು ತಮಗೆ ದೊರೆಯಬೇಕೆಂದು ವಿಜಯನಗರ, ವೇಲಂ ಪಟ್ಟಣಗಳ ಸಾರ್ವಭೌಮರು ಮುಹಮ್ಮದಶಹನನ್ನು ಬೇಡಹತ್ತಿದರು. ಅಧಿಕಾರಸಿದ್ಧವಾದ ತಮ್ಮ ಬೇಡಿಕೆಯ ಮೇರೆಗೆ ನಡೆಯದಿದ್ದರೆ, ಸಂಗ್ರಾಮವನ್ನು ಪ್ರಾರಂಭಿಸಬೇಕಾಗುವದೆಂದೂ, ಭಾವೀಸಂಗ್ರಾಮಕ್ಕೆ ದಿಲ್ಲಿಯ ಬಾದಶಹನ ಸಹಾಯವಿರುವದೆಂದೂ ಅವರು ಸುಲತಾನನಿಗೆ ಸೂಚಿಸಿದ್ದರು. ಅವರ ಇಚ್ಛೆಯ ಮೇರೆಗೆ ನಡೆಯುವದಕ್ಕೆ ಮುಹಮ್ಮದಶಹನ ಸ್ವಾಭಿಮಾನಿಯಾದ ಮನಸ್ಸು ಒಪ್ಪಲೊಲ್ಲದು. ಯುದ್ಧವನ್ನು ಸಾರಬೇಕೆಂದರೆ ಯೋಗ್ಯತೆಯಿರಲಿಲ್ಲ. ಹೀಗಾಗಿ ಅವನು ಒಳ್ಳೆಯ ತೊಂದರೆಯಲ್ಲಿ ಸಿಲುಕಿದನು. ಅವರಿಗೆ ಯಾವದೊಂದು ನಿರ್ಧಾರವನ್ನು ಹೇಳಲಾರದಾದ ಶಹನು ವಿಜಯನಗರ-ವೇಲಂ ಪಟ್ಟಣದ ರಾಯಭಾರಿಗಳನ್ನು ಹದಿನೆಂಟು ತಿಂಗಳುಗಳ ವರೆಗೆ ಕಲಬುರ್ಗೆಯಲ್ಲಿರಿಸಿಕೊಂಡಿದ್ದನು.

ಮುಹಮ್ಮದಶಹನು ಎಷ್ಟಾದರೂ ಪಠಾಣನು. ಹಿಂದುಗಳ ಅಳ್ಳುಬೆದರಿಕೆಗೆ ಅಳುಕುವಂತಹ ಅಳ್ಳೆದೆಯವನಿರಲಿಲ್ಲ. ಹದಿನೆಂಟು ತಿಂಗಳುಗಳ ಅವಧಿಯಲ್ಲಿ ರಾಜ್ಯಸೂತ್ರಗಳನ್ನು ಸಾವರಿಸಿಕೊಂಡು ಕೈಗೆ-ಕೈ ಕೊಡುವಷ್ಟು ಶಕ್ತಿವಂತನಾದನು. ಹಿಂದುರಾಜ್ಯಗಳನ್ನು ವಿಧ್ವಂಸ ಮಾಡಿ ದಕ್ಷಿಣದಲ್ಲೆಲ್ಲ ಮುಹಮ್ಮದೀಯ ರಾಜ್ಯವನ್ನು ಪ್ರಸ್ಥಾಪಿಸಬೇಕೆಂಬ ಆಸುರೀ ಮಹತ್ವಾಕಾಂಕ್ಷೆಯು ಅವನಲ್ಲಿ ಉದಯಿಸಿತ್ತು. ಕುರಿಮರಿಗಳನ್ನು ತಿಂದು ಹೆಬ್ಬುಲಿಯಾದ ಮೇಲೆ ವಿಜಯನಗರ-ತೆಲಂಗಣದ ರಾಯಭಾರಿಗಳಿಗೆ ಏನು ಉತ್ತರ ಕೊಟ್ಟು ಕಳಿಸಬೇಕೆಂಬ ಬಗ್ಗೆ ಅವನು ಸಭೆಯನ್ನು ನೆರೆಯಿಸಬೇಕೆಂದು ಯೋಚಿಸಿದನು. ತಮಗೆ ಅಂಜಿ ತಮ್ಮ ರಾಯಭಾರಿಗಳಿಗೆ ಸನ್ಮಾನಪೂರ್ವಕವಾಗಿ ಆದರಾತಿಥ್ಯಗೈಯುತ್ತ

ಇಷ್ಟು ದಿವಸಗಳ ವರೆಗೆ ಇಟ್ಟುಕೊಂಡಿರುವನೆಂಬ ಭ್ರಾಮಕಕಲ್ಪನೆಯು ಸಾಧು ಸ್ವಭಾವದ ತೆಲಂಗಣ ಕರ್ನಾಟಕದ ರಾಜರನ್ನು ಇನ್ನೂ ಬಿಟ್ಟಿರಲಿಲ್ಲ. ಏನಾದರೂ ಅವರದು ಹಿಂದುಹೃದಯವಲ್ಲವೆ?

ಮಹಮ್ಮದಶಹನು ಓಲಗದಲ್ಲಿ ಕುಳಿತಿದ್ದನು. ಮಹತ್ವದ ವಿಷಯದ ಬಗ್ಗೆ ಚರ್ಚೆಯಾಗತಕ್ಕದ್ದಿದ್ದುದರಿಂದ ಮೊದಲೇ ಶೋಭಾಯಮಾನವಾಗಿರುತ್ತಿದ್ದ ಅವನ ಓಲಗಕ್ಕೆ ಇಂದು ಮತ್ತಿಷ್ಟು ಕಳೆಯು ಬಂದಿತ್ತು. ಮಂತ್ರಿ-ಸೇನಾಪತಿಗಳೂ, ಸುಭೇದಾರ-ಸರದಾರರೂ ತಮ್ಮ ತಮ್ಮ ಸ್ಥಳದಲ್ಲಿ ಮಂಡಿಸಿದ್ದರು. ರಾಜಧಾನಿಯೊಳಗಿನ ಪ್ರಸಿದ್ಧ ಮುಂದಾಳುಗಳಾದರೂ ಅಂದು ಸಭೆಗೆ ದಯಮಾಡಿಸಿದ್ದರು. ಶಹನು ಕರ್ನಾಟಕ ತೆಲಂಗಣದ ರಾಜರಿಗೆ ಏನು ಸಂದೇಶವನ್ನು ಕಳಿಸುವನೋ ಏನೋ ಎಂಬದನ್ನು ಕೇಳುವದಕ್ಕಾಗಿ ಉತ್ಸುಕತೆಯಿಂದ ಪ್ರೇಕ್ಷಕವೃಂದವಾದರೂ ಒಳಿತಾಗಿ ಕೂಡಿತ್ತು. ಒಳ್ಳೆಯ ಆಢ್ಯತೆಯಿಂದ ವಿರಾಜಮಾನವಾಗಿದ್ದ ಬಾದಶಹನ ಮುಖದಿಂದ ಎಂತಹ ಮುಕ್ತಾಫಲಗಳು ಹೊರಬೀಳುವವೆಂಬದನ್ನು ನಿರೀಕ್ಷಿಸುವದಕ್ಕೆ ಅವರು ಉತ್ಕಂಠಿತರಾಗಿದ್ದರು. ಆಗ ಬಾದಶಹನು ಸಭೆಯನ್ನುದ್ದೇಶಿಸಿ ತನ್ನ ರಸಾಳವಾಣಿಯಿಂದ:—

"ಸಭಿಕರೇ, ನೀವೆಲ್ಲರೂ ಬಹಾಮನೀ ಸಿಂಹಾಸನದ ಏಕನಿಷ್ಠ ಪ್ರಜೆಗಳಿರುವಿರೆಂಬ ಮಾತು ನನಗೆ ಅವಗತವಿದೆ. ಈ ಸಿಂಹಾಸನದ ಸ್ಥೈರ್ಯವು ಸ್ವಾಮಿನಿಷ್ಠರಾದ ನಿಮ್ಮ ಸತ್ವವನ್ನು ಅವಲಂಬಿಸಿರುವದು. ತಘಲಖ ಮಹಮ್ಮದಶಹನ ಉಪದ್ರವಕ್ಕೆ ಬೇಸತ್ತು ದಕ್ಷಿಣಾತ್ಯರಾದ ನೀವು ನನ್ನ ಪರಮಪೂಜ್ಯ ಪಿತೃಗಳಿಗೆ ಅನೇಕ ಬಗೆಯಿಂದ ಸಹಾಯ ಮಾಡಿ ಈ ಬಾಮನೀ ಸಿಂಹಾಸನವನ್ನು ಪ್ರಸ್ಥಾಪಿಸಿ ಯಶೋಭಾಗಿಗಳಾಗಿರುವಿರಿ. ಈ ಸಿಂಹಾಸನದ ರಕ್ಷಣೆಯ ಬಗ್ಗೆ ನೀವು ಸದೈವ ತತ್ಪರರಾಗಿರಬೇಕೆಂದು ನಾನು ಹೇಳುವ ಕಾರಣವಿಲ್ಲ. ನಿಮ್ಮ ಅಭಿಮಾನಕ್ಕೆ ವ್ಯತ್ಯಯ ತರುವ ಕಾರ್ಯಗಳನ್ನು ನೀವು ಮಾಡಲಾರರಿರೆಂದು ನನ್ನ ಆತ್ಮವಿಶ್ವಾಸವಿದೆ. ಉತ್ತರವೆಲ್ಲ ಮಹಮ್ಮದೀಯ ರಾಜ್ಯವಾದಂತೆ ದಕ್ಷಿಣದೇಶವೆಲ್ಲ ಅವರ ಅಧಿಕಾರಕ್ಕೊಳಪಡಬೇಕೆಂಬ ಪರಮಾವಧಿಯಾದ ನನ್ನ ಮಹತ್ವಾಕಾಂಕ್ಷೆಯು ಸದ್ಯದ ಸ್ಥಿತಿಯಲ್ಲಿ ಈಡೇರುವ ಆಶೆಯು ಇರುವದಿಲ್ಲೆಂಬದು ನಿಮಗೆ ವಿದಿತವಿದ್ದರೂ ಪ್ರಸಂಗವೊದಗಿದಾಗ ತಕ್ಕ ಸಾಹಸ ಮಾಡದಿರೆನು. ಕಾಫರ ಅರಸರಾದ ವಿನಾಯಕದೇವ, ಬುಕ್ಕರಾಯರು ತಮ್ಮ ರಾಯಭಾರಿಗಳನ್ನು ಇಲ್ಲಿ ಇಟ್ಟಿದ್ದರ ಕಾರಣವಾದರೂ ನಿಮಗೆ ಗೊತ್ತಿರುವದು. ಬಾಮನೀ ಸಿಂಹಾಸನಕ್ಕೆ ಅಪಮಾನಕಾರಕವಾದ ವರ್ತನವು ಸಹನವಾಗುವದಿಲ್ಲೆಂಬ ಮಾತು ನಿಮಗೆಲ್ಲರಿಗೂ ಗೊತ್ತಿದ್ದುದರಿಂದ, ನಮ್ಮ ಅಭಿಮಾನಕ್ಕೆ ಕುಂದು ಬಾರ

ದಂತೆ ನಿಮ್ಮ ನಿಮ್ಮ ಅಭಿಪ್ರಾಯವೇನಿರುವದೆಂಬದನ್ನು ನಿದಾಕ್ಷಿಣ್ಯದಿಂದ ವ್ಯಕ್ತ ಪಡಿಸಿರಿ.''

ಮಹಮ್ಮದಶಹನು ತನ್ನ ಅಭಿಪ್ರಾಯವನ್ನು ಈ ಪ್ರಕಾರವಾಗಿ ವ್ಯಕ್ತ ಪಡಿಸಿದ ಕೂಡಲೆ ಅವನ ಮಂತ್ರಿಯಾದ ಮಲಿಕಸೈಫುದ್ದೀನಘೋರಿಯು ಆಸನ ದಿಂದೆದ್ದು ಕುರ್ನಿಸಾತ ಮಾಡಿ: —

''ಗರೀಬಪರವರದಿಗಾರ, ನಾವು ಕಾಫರರಿಗೆ ತಿಲಾಂಶವಾದರೂ ಅಂಜ ತಕ್ಕ ಕಾರಣವಿಲ್ಲ. ಅವರ ಮದವನ್ನು ಇಳಿಸುವದಕ್ಕೆ ಬಹಾಮನೀ ಸೈನ್ಯವು ಸಮರ್ಥವಿರುವದು. ಮಾಯಿಸಾಹೇಬ-ಮಲಿಕಜಹಾನರು ಮಕ್ಕಾ-ಮದೀನಾ-ಕರ್ಬಲಾ ಮೊದಲಾದ ಯಾತ್ರೆಗಳಿಗಾಗಿ ಹೋದದ್ದರಿಂದ, ಇಷ್ಟು ದಿವಸ ಬೊಕ್ಕಸ ದಲ್ಲಿ ಹಣದ ಕೊರತೆಯಿತ್ತೆಂದು ಕೈ ಕಾಯಬೇಕಾಯಿತು. ಪಾತಶಹಾ ಅಲ್ಲಾ ವುದ್ದೀನಶಹರು ಬಾಹುಬಲದಿಂದ ಗೆದ್ದ ಸೀಮೆಗಳನ್ನು ತಿರುಗಿ ಕೊಡುವದೆಂದರೆ ನಮ್ಮ ರಾಜ್ಯದ ಮರ್ಯಾದೆಗೆ—ತಮ್ಮ ಸಿಂಹಾಸನದ ಗೌರವಕ್ಕೆ—ಬಾಧೆ ಬಂದಂತೆಯೇ ಸರಿ. ದಕ್ಷಿಣ ದೇಶವನ್ನೆಲ್ಲ ಹಸ್ತಗತ ಮಾಡಿಕೊಂಡು ಸರ್ವತ್ರ ದಲ್ಲಿ ಯವನ ಸತ್ತೆಯು ನೆಲೆಗೊಳ್ಳಲ್ಪಡಬೇಕೆಂಬ ಸ್ತುತ್ಯ ಮಹತ್ವಾಕಾಂಕ್ಷೆಯು ಳ್ಳವರಾದ ತಮಗೆ, ಗೆದ್ದುಕೊಂಡ ಪ್ರಾಂತಗಳ ಸ್ವಾಮಿತ್ವವನ್ನು ಬಿಟ್ಟುಕೊಡುವ ಮಾತು ಎಷ್ಟು ಅಗೌರವದ್ದಿರುವದೋ, ಅಷ್ಟೇ ಹಾಸ್ಯಾಸ್ಪದವಿರುವದು. ನಮ್ಮ ಖಡ್ಗಗಳು ಹೇಡಿ ಕಾಫರರಿಗೆ ಅಂಜುವಷ್ಟು ಹೇಡಿಯಾಗಿಲ್ಲ. ಯೋಗ್ಯ ಕಾಣಿಕೆ ಯಿತ್ತು ಬಹಾಮನೀ ಸಿಂಹಾಸನದೊಂದಿಗೆ ಪ್ರೇಮದಿಂದಲೂ, ಭಕ್ತಿಯಿಂದಲೂ ನಡೆದುಕೊಂಡರೆ ನಾಲ್ಕೊಪ್ಪತ್ತು ಬಾಳುವಿರಿ; ಇಲ್ಲವಾದರೆ ಕರಾಲ ರೂಪಿಯಾದ ಕಲಬುರ್ಗೆಯ ಸೈನ್ಯವು ಹಿಂದು ರಾಜ್ಯಗಳನ್ನು ಉಧ್ವಸ್ತ ಮಾಡುವದಕ್ಕೆ ಸಿದ್ಧ ವಿರುವದೆಂದು ಸಂದೇಶವನ್ನು ಕಳುಹಿಸುವದಾಗಬೇಕು.''

ಸೈಫುದ್ದೀನನ ಆವೇಶಯುಕ್ತವಾದ ಭಾಷಣದಿಂದ ಮಹಮ್ಮದನು ಆನಂದ ಸಾಗರದಲ್ಲಿ ಮುಳುಗಿದ್ದನು ಸೈಫುದ್ದೀನನು ಮಾತನಾಡುವ ಹರ್ಷೋದ್ರೇಕ ದಿಂದ ಉನ್ಮತ್ತನಾದ ಅವನು ಬಾಯಿಂದ 'ಅಚ್ಛಾ! ಅಚ್ಛಾ!!' ಎಂದು ಉದ್ಗಾರ ತೆಗೆಯುತ್ತಲಿದ್ದನು.

''ಸೈಫುದ್ದೀನಖಾನ, ನಿಮ್ಮ ಆವೇಶಯುಕ್ತ ಭಾಷಣದಿಂದ ನನಗೆ ಪರಮಾ ನಂದವಾಯಿತು. ನಿಮ್ಮಂತಹ ಶೂರರೂ, ಸ್ವಾಮಿನಿಷ್ಠರೂ ಆದ ನರರತ್ನಗಳು ನಮ್ಮ ರಾಜ್ಯದಲ್ಲಿರುವದರಿಂದಲೇ ನಾವು ಕಾಫರರಿಗೆ ಅಜಿಂಕ್ಯರಾಗತೊಡಗಿರು ವೆವು. ನಿಮ್ಮ ಅಭಿಪ್ರಾಯದಂತೆ ಆ ಕಾಫರ ರಾಯಭಾರಿಗಳಿಗೆ ತಿಳಿಸಿ ಕಳುಹಿ ಸೋಣ, ಅವರು ಹೇಳಿದಂತೆ ನಡೆಯುತ್ತ ಹೋದರೆ ಹಿಂದುಸ್ತಾನದಲ್ಲಿ ನಮ್ಮ

ಅಸ್ತಿತ್ವವೇ ನಾಶವಾದೀತು! ಓಹಾ ಮನೀ ಕರಾಳಖಡ್ಗದ ಚಪಲತೆಯನ್ನು ನೋಡಬೇಕೆಂದು ಆ ನೀಚ ಕಾಫರರ ಮನಸ್ಸಿನಲ್ಲಿದ್ದರೆ ಅದರಿಂದ ನಮ್ಮ ಹಾನಿಯೇನು ಆಗುವಂತಿದೆ? ದಕ್ಷಿಣದಲ್ಲಿ ಹಿಂದುರಾಜರ ವಾಸ್ತವ್ಯವನ್ನು ನಾಶಮಾಡಬೇಕೆನ್ನುವ ನಮ್ಮ ಮಹತ್ವಾಕಾಂಕ್ಷೆಯು ಈಡೇರಬೇಕಾದರೆ ಇಂತಹ ಕಾರಣಗಳು ಘಟಿಸಬೇಕಲ್ಲವೆ?''

ಮಹಮ್ಮದಶಹನು ತನ್ನ ನೀಳವಾದ ಗಡ್ಡಗಳ ಮೇಲೆ ಕೈಯೆಳೆಯುತ್ತ ಹೀಗೆ ಮಾತನಾಡುತ್ತಿದ್ದನು. ಸಭಿಕರು ವೇಲಾಯಂತ್ರದೊಳಗಿನ ಅಂದೋಲಕದಂತೆ ಶಿರಾಂದೋಲನ ಗೈಯುತ್ತ ತದೇಕಮನಸ್ಕರಾಗಿ ಕುಳಿತಿದ್ದರು. ಅಷ್ಟರಲ್ಲಿ ದ್ವಾರರಕ್ಷಕನೋರ್ವನು ಶಹನಿಗೆ ಕುರ್ನಿಸಾತ ಮಾಡಿ:—'ತಮ್ಮ ದರ್ಶನಕ್ಕಾಗಿ ವೇಲಂ ಪಟ್ಟಣದ ಚರನೊಬ್ಬನು ಬಂದಿರುವನು' ಎಂದು ಹೇಳಲು, ಶಹನು ಅವನನ್ನು ಓಲಗದಲ್ಲಿ ಕಳಿಸಬೇಕೆಂದು ಆಜ್ಞಾಪಿಸಿದನು. ಕೂಡಲೆ ವೇಲಂ ಪಟ್ಟಣದ ಚರನು ಶಹನಿಗೆ ಮೂರು ಸಾರೆ ಮುಜುರೆ ಮಾಡಿ, ತನ್ನಲ್ಲಿ ಭದ್ರವಾಗಿರಿಸಿಕೊಂಡಿದ್ದ ಕಾಗದದ ಚೀಲವನ್ನು ಅವನಿಗೆ ಒಪ್ಪಿಸಿ:—

''ಖಾವಿಂದ, ಗುಪ್ತವಿಚಾರದ ಈ ಪತ್ರದೊಳಗಿನ ಸಂಗತಿಯು ಅತ್ಯಂತ ಗೌಪ್ಯವಾಗಿರತಕ್ಕದ್ದೆಂದು ನನ್ನ ಒಡೆಯರ ವಿನಂತಿಯಿದೆ'' ಎಂದು ಹೇಳಿದನು.

ಖಾನನು ಚೀಲವನ್ನು ತಾನೇ ತೆಗೆದುಕೊಂಡು ಒಡೆದು, ಪತ್ರವನ್ನು ಮನದಲ್ಲಿ ಓದತೊಡಗಿದನು. ಅವನು ಓದುತ್ತ ಹೋದ ಹಾಗೆ ಮುಖದ ಮೇಲೆ ಆನಂದಲಹರಿಯ ಕಿರಣಗಳು ಪ್ರಕಾಶಿಸತೊಡಗಿದವು. ಅವನು ಹಾಸ್ಯಮುಖದಿಂದ ಪತ್ರವನ್ನು ಓದತೊಡಗಿದ್ದನು. ಪತ್ರದಲ್ಲಿ ಯಾವ ಮಹತ್ವದ ಸಂಗತಿಯಿರುವದೋ ಏನೋ, ಎಂದು ಜನರು ಶಹನ ಮುಖವನ್ನು ಎವೆಯಿಕ್ಕದೆ ನೋಡತೊಡಗಿದ್ದರು. ಓಲಗವು ಸ್ತಬ್ಧವಾಗಿತ್ತು. ಪತ್ರದ ಸಂಗತಿಯನ್ನು ತಿಳಿದುಕೊಳ್ಳುವದಕ್ಕೆ ಎಲ್ಲರೂ ಉತ್ಕಂಠಿತರಾಗಿದ್ದರು; ಆದರೆ ಶಹನನ್ನು ವಿಚಾರಿಸುವ ಧೈರ್ಯವು ಅದಾರಿಗೆ ಬಂದೀತು?

ಪತ್ರವನ್ನು ಪೂರ್ಣವಾಗಿ ಓದಿದ ಮೇಲೆ ಶಹನು ಒಮ್ಮೆ ಗಹಗಹಿಸಿ ನಕ್ಕನು. ಅವನು ನಕ್ಕನೆಂದು ಓಲಗದ ಜನರಾದರೂ ನಕ್ಕರು. ಶಹನು ನಗುವದಕ್ಕೆ ಕಾರಣವಿತ್ತು? ಓಲಗದ ಜನರಿಗೆ ಮಾತ್ರ ಶಹನು ನಕ್ಕ ಕಾರಣವೇ ಕಾರಣ. 'ಯದ್ಯದಾ ಚರತೀ ಶ್ರೇಷ್ಠಸ್ತತ್ತದೇವೇತರೋ ಜನಾಃ' ಎಂಬ ಗೀತೋಕ್ತಿಯನ್ನು ಅವರು ಯಥಾಶಕ್ತಿಯಾಗಿ ಪಾಲಿಸುವದರಲ್ಲಿ ವ್ಯತ್ಯಯ ಮಾಡಲಿಲ್ಲ. ನಗುವದಿಷ್ಟೇ ಆಯಿತು; ನಗುವದಕ್ಕೆ ಕಾರಣವಾಗಿದ್ದ ಪತ್ರದ ಸಂಗತಿಯನ್ನು ತಿಳಿದುಕೊಳ್ಳುವ ಕುತೂಹಲವು ದೊಡ್ಡವರಿಂದ ಸಣ್ಣವರ ವರೆಗೆ ಎಲ್ಲ ತರದ

ಜನತಲ್ಲಿಯೂ ಒಳ್ಳೆಯ ದೃಢವಾಗಿ ವಾಸವಾಗಿತ್ತೇ ಹೊರತು, ಕೇಳುವ ಮನೋದಾರ್ಢ್ಯವು ಯಾರಲ್ಲಿಯೂ ಹುಟ್ಟಲಿಲ್ಲ. ಶಹನಾದರೂ ಆ ಗುಪ್ತ ಪತ್ರದ ಸಂಗತಿಯನ್ನು ಹೇಳುವ ಉಸಾಬರಿಯನ್ನು ಮಾಡಲಿಲ್ಲ.

"ಬಹೂತ ಅಚ್ಛಾ! ಪರವರದಿಗಾರ ಅಲ್ಲಾನು ನಮಗೆ ಅನುಕೂಲ ನಿರುವನು" ಎಂದು ಖಾನನು ನುಡಿದು:—"ಈ ಪತ್ರದೊಳಗಿನ ಸಂಗತಿಯನ್ನು ಸದ್ಯಕ್ಕೆ ಗೌಪ್ಯವಾಗಿಡಬೇಕಾಗಿರುವದು; ಕ್ರಮೇಣ ಎಲ್ಲರಿಗೂ ತಿಳಿದು ಬರುವದು" ಎಂದು ಶಹನು ನುಡಿದನು.

ವಾಚಕ ಮಹಾಶಯರೇ, ಗುಪ್ತಲೇಖನವು ಏನಿರಬಹುದೆಂದು ತಿಳಿದು ಕೊಳ್ಳುವದಕ್ಕಾಗಿ ತಾವು ಆತುರಪಡುತ್ತಿರಬಹುದಲ್ಲವೆ? ಅದನ್ನು ಪ್ರಸಂಗಾನು ಸಾರವಾಗಿ ತಮ್ಮೆದುರಿನಲ್ಲಿಡುವೆವೆಂದು ನಾವು ನಿಶ್ಚಯಪೂರ್ವಕ ಹೇಳುವೆವು.

## ಮನಸ್ಸಿನ ಗೊಂದಲ.

ಕೃಷ್ಣಸುಂದರಿಯು ರಾಜಕುಮಾರನಲ್ಲಿ ಅನುರಕ್ತಳಾಗಬೇಕೆಂಬ ಇಚ್ಛೆಯು ಸೋಮಲದೇವನಲ್ಲಿ ಒಳ್ಳೆಯ ರಭಸದಿಂದ ಬೆಳೆಯುತೊಡಗಿತ್ತು. ತೆಲಂಗಣದ ರಾಜಕುಮಾರನು ತನಗೆ ಅಳಿಯನಾಗುವ ಸುಯೋಗವು ಎಂದು ಲಭಿಸುವದೆಂದು ಅವನು ಹುಬ್ಬುಗೈ ಹಚ್ಚಿ ಮಾರ್ಗಪ್ರತೀಕ್ಷೆ ಮಾಡತೊಡಗಿದ್ದನು. ಮಗಳು ಚಂಡಿತನ ಹಿಡಿದ ಸಂಗತಿಯು ಅವನಿಗೆ ಗೊತ್ತಿದ್ದರೂ, ಇಂದಿಲ್ಲ ನಾಳೆಯಾದರೂ ಹಾದಿಗೆ ಬರಬಹುದೆಂದು ವಿಶ್ವಾಸವಿಟ್ಟಿದ್ದನು. ಈಗಾಗಲೇ ಅವನು ತನ್ನ ಭಾವೀ ಮನೋಮಂದಿರವನ್ನು ಸಿಂಗರಿಸುವ ಕಾರ್ಯದಲ್ಲಿ ತತ್ಪರನಾಗಿದ್ದನು.

ಕೃಷ್ಣಸುಂದರಿಯು ರಾಜಕುಮಾರನನ್ನು ವರಿಸಲಿ, ಇಲ್ಲವೆ ವರಿಸದಿರಲಿ; ಅವನು ವಿಷಯ ವ್ಯಾಮೋಹದಿಂದ ಅಂಧನಾಗಿ ರಾಜಕಾರ್ಯದ ಕಡೆಗೆ ದುರ್ಲಕ್ಷಿಸಬೇಕೆಂದು ಇನ್ನೊಂದು ವ್ಯಕ್ತಿಯು ಅವ್ಯಾಹತವಾಗಿ ಸಾಹಸ ನಡೆಸಿತ್ತು. ಅದಾವ ವ್ಯಕ್ತಿಯೆಂದರೆ, ತೆಲಂಗಣದ ಸರದಾರನಾದ ವಿಕ್ರಮದೇವನು! ಹೀಗೆ ಅವನು ಯತ್ನಿಸುವದಕ್ಕೆ ಕಾರಣವೇನಿರಬಹುದೋ ಯಾರಿಗೆ ಗೊತ್ತು? ಊಟದ ನಿಮಿತ್ಯದಿಂದ ಇಲ್ಲವೆ, ಉಪಹಾರದ ನಿಮಿತ್ಯದಿಂದ ಅವನು ರಾಜಕುಮಾರನನ್ನು ಸೋಮಲದೇವನ ಮನೆಗೆ ಕರೆಯಿಸುತ್ತಿದ್ದನು. ಕೃಷ್ಣಸುಂದರಿಗೂ ಅವನಿಗೂ ಸ್ನೇಹವು ನೆಲೆಗೊಳ್ಳುವಂತೆ ದೀರ್ಘಸಾಹಸ ಮಾಡುತ್ತಿದ್ದನು. ರಾಜಕುಮಾರನು ವಿಷಯಾಂಧತೆಯಿಂದ ಅಡ್ಡಮಾರ್ಗವನ್ನು ಹಿಡಿದರೂ ಮನಸ್ಸಿಗೆ ಹಚ್ಚಿಕೊಳ್ಳತಕ್ಕದ್ದಲ್ಲವೆಂದು ಅವನು ಕೃಷ್ಣಸುಂದರಿಗೆ ಹೇಳಿಟ್ಟಿದ್ದನು. ನಿರ್ಮಲಾಂತಃ

ಕರಣದ ಸ್ನೇಹಕ್ಕೆ ಬಾಧಕವೆಲ್ಲಿರುವದೆಂದು, ಅವಳಾದರೂ ಸ್ನೇಹಕ್ಕೆ ಯೋಗ್ಯನೂ, ಸಾರ್ವಭೌಮ ರಾಜಕುಮಾರನೂ ಆದವನೊಡನೆ ಎರಡು ಪ್ರೇಮಳ ಮಾತನಾಡುವದಕ್ಕೆ ಹಿಂಜರಿಯುವಳೇಕೆ? ರಾಜಕುಮಾರನಿಂದ ಒಮ್ಮೊಮ್ಮೆ ಅನುಚಿತ ಭಾಷಣವಾಡಲ್ಪಟ್ಟರೂ ಆ ಸುಶೀಲಳು ಮನಸ್ಸಿಗೆ ಹಚ್ಚಿಕೊಳ್ಳದೆ ಸಮುದ್ರದಂತೆ ಗಂಭೀರ ಗುಣವನ್ನು ತಳೆಯುತ್ತಿದ್ದಳು.

''ಸುಂದರೀ, ಜಗತ್ತಿನಲ್ಲಿ ಸರ್ವಪ್ರಾಣಿಗಳು ಸೌಖ್ಯದಾಶೆಗಾಗಿ ಹೇಗೆ ಧಾವಿಸುತ್ತಿರುವರೆಂಬದನ್ನು ತಿಳಿಯದಷ್ಟು ನೀನು ಅಪ್ರಬುದ್ಧಳಿರುವೆಯೆಂದಲಿ ನಾನು ತಿಳಿದಿರಲಿಲ್ಲ.''

ಸಾಯಂಕಾಲದ ಸಮಯವಾಗಿತ್ತು. ಭಗವಾನ್ ದಿನಮಣಿಯು ಪಶ್ಚಿಮಾಂಗನೆಯನ್ನು ಆಲಂಗಿಸುವ ಉತ್ಸುಕತೆಯುಳ್ಳವನಾಗಿ ಒಳ್ಳೆಯ ರಭಸದಿಂದ ತೆರಳಿದ್ದನು. ವಿರಹದಿಂದ ತಪಿಸುತ್ತಿದ್ದ ದಿವಾಕರನು ಬೇಗನೆ ತನ್ನ ಪ್ರಿಯತಮೆಯ ಸಮಾಗಮವಾಗುವದೆಂಬ ಹರ್ಷಾತಿರೇಕದಿಂದ ಪ್ರಫುಲ್ಲಿತ ವದನನಾಗಿದ್ದನು. ತನ್ನ ಹೃದಯ ದೇವತೆಯನ್ನು ಹೃದಯದಲ್ಲಪ್ಪಿಕೊಳ್ಳಬೇಕೆಂದು ಧಾವಿಸಿರುವ ಪ್ರಭಾಕರನ ಮುಖವು ಅವನ ನೈಸರ್ಗಿಕ ಮನೋಧರ್ಮದಿಂದ ಕೆಂಪಡರಿತ್ತು. ವಸಂತಮಾಸದ ಮಂದಮಾರುತನು ಮಂದಲಹರಿಯಿಂದ ಸರ್ವತ್ರದಲ್ಲಿ ಆನಂದವನ್ನುಂಟು ಮಾಡುತ್ತಿದ್ದನು. ತರುಲತೆಗಳು ನವಪಲ್ಲವಗಳಿಂದಲೂ ಕುಸುಮಕುಟ್ಮಲಗಳಿಂದಲೂ ಸುಶೋಭಿತವಾಗಿ ಸೃಷ್ಟಿದೇವತೆಗೆ ಅದ್ವಿತೀಯವಾದ ಶೋಭೆಯನ್ನು ಕೊಟ್ಟಿದ್ದವು. ವಸಂತಮಾಸದ ಇಂಪಾದ ಸಾಯಂಕಾಲದ ಸಮಯದಲ್ಲಿ ಸೋಮಲದೇವನು ರಾಜಕುಮಾರನನ್ನು ಸಂಧ್ಯಾಕಾಲದ ಉಪಾಹಾರದ ನಿಮಿತ್ತವಾಗಿ ಬರಮಾಡಿಕೊಂಡಿದ್ದನು. ದೇವದಾನವರಿಗೆ ಅಮೃತವನ್ನುಣಬಡಿಸುವ ಮೋಹಿನಿಯನ್ನು ತಲೆಬಾಗಿಸುವ ಕೃಷ್ಣಸುಂದರಿಯು ಎಲ್ಲ ಜನರಿಗೆ ಉಪಹಾರ ಕೊಡತೊಡಗಿದ್ದಳು. ಅಂದಿನ ಉಪಹಾರಕ್ಕೆ ವಿಕ್ರಮದೇವನು ರಾಮದೇವನನ್ನು ಬರಮಾಡಿಕೊಂಡಿದ್ದನು. ಉಪಾಹಾರವು ನಡೆದಾಗ ಮಾತಿಗೆ ಮಾತು ಹೊರಟು ಕೃಷ್ಣಸುಂದರಿಯ ವಿವಾಹದ ಪ್ರಸ್ತಾಪವು ಬದ್ಧಿಪೂರ್ವಕವಾಗಿ ತೆಗೆಯಲ್ಪಟ್ಟಿತು. ಆಗ ರಾಜಕುಮಾರನು ಕೃಷ್ಣಸುಂದರಿಯನ್ನು ಕುರಿತು ಮೇಲಿನಂತೆ ಉದ್ಗಾರ ತೆಗೆದನು.

''ಮಹಾರಾಜರೇ, ಸುಖ ದುಃಖಗಳು ಅವರವರ ಮನಸ್ಸಿನ ಧರ್ಮವನ್ನು ಅವಲಂಬಿಸಿರುವವು. ಸಮ್ರಾಟನನ್ನು ವರಿಸಿದ ಸಾಮ್ರಾಜ್ಞಿಯು ಅತ್ಯಂತ ಸುಖಿಯಾಗಿರುವಳೆಂದು ನೀವು ನಿಶ್ಚಿತವಾಗಿ ಹೇಳುವದಕ್ಕೆ ಸಮರ್ಥರಿರುವಿರೇನು? ಕೇವಲ ದರಿದ್ರನ ಸಹವಾಸದಲ್ಲಿರುವ ಲಲನೆಗೆ ಸೌಖ್ಯದ ಗಂಧವಾದರೂ ಇರುವ

ದಿಲ್ಲವೆಂಬದನ್ನು ಹೇಳುವ ಸಾಹಸವನ್ನಾದರೂ ಮಾಡುವಿರೇನು?''

"ಕೃಷ್ಣಸುಂದರೀ, ತೆಲಂಗಣದ ಭಾವೀಸಮ್ರಾಟನು ಪ್ರೇಮಪುರಸ್ಸರವಾಗಿ ನಿನ್ನ ಸಹವಾಸವನ್ನು ಬಯಸುತ್ತಿರುವಾಗ, ನೀನು ಅವನ ನಿರಾಕರಣೆ ಮಾಡುವದು ಹುಚ್ಚುತನದ ಲಕ್ಷಣವಲ್ಲವೆ? ತಾನಾಗಿ ಒದಗಿ ಬಂದ ಶುಭೋದಯ ಕಾಲದ ತಿರಸ್ಕಾರ ಮಾಡಬಾರದು.''

"ಮಹಾರಾಜರೇ, ದರಿದ್ರರಾದ ನಮ್ಮಂಥ ಅಬಲೆಯರು ಸಮ್ರಾಟನ ಸಾಮ್ರಾಜ್ಞಿಯಾಗುವ ಹವ್ಯಾಸವನ್ನೇಕೆ ಮಾಡಬೇಕು? ರಾಜರ ಮನಸ್ಸಿನ ಲಹರಿಯು ಅನಿಯಂತ್ರಿತವಾದದ್ದಿರುವದೆಂಬದು ನನ್ನ ಅನುಭವಕ್ಕೆ ಬಂದಿದೆ. ಇಂದಿನ ಲಹರಿಯಲ್ಲಿ ನಾನು ತಮಗೆ ಪ್ರೀತ್ಯಾಸ್ಪದಳಾಗಿದ್ದರೂ, ಮತ್ತೊಂದು ವಿಶೇಷವಾದ ಕಾರಣವು ಘಟಿಸಿದರೆ ನಾಳಿಗೇ ಮಾತಿಗೆ ಬಾರದವಳಾಗುವೆನೆಂಬದು ನನಗೆ ಗೊತ್ತಿರುವದು.''

"ಮಾನಿನೀ, ಹಾಗೆ ಅನ್ಯಕಲ್ಪನೆ ಮಾಡಬೇಡ. ಈ ವಿನಾಯಕದೇವನು ಅಂತಹ ಕಠೋರ ಹೃದಯದವನಿರುವದಿಲ್ಲ.''

"ಮಹಾರಾಜರೇ, ಈ ವಿಷಯದಲ್ಲಿ ತಾವು ಇಷ್ಟು ಆತುರಪಡಬೇಡಿರಿ. ಮಹತ್ವದ ಕಾರ್ಯ-ಕಾರಣದಲ್ಲಿ ಸಂಪೂರ್ಣವಾಗಿ ವಿಚಾರಿಸಿ ನಿರ್ಧರಿಸಬೇಕಾಗುವದು. ಸದ್ಯಕ್ಕೆ ಈ ಪ್ರಸ್ತಾಪವನ್ನು ಇಲ್ಲಿಗೇ ನಿಲ್ಲಿಸಿರಿ.''

ರಾಜಕುಮಾರನಿಗೆ ಕೃಷ್ಣಸುಂದರಿಯು ಹೀಗೆ ಬುದ್ಧಿಪೂರ್ವಕವಾಗಿ ನುಡಿದಳು. ವಿಷಯಾಂಧನಾದ ವಿನಾಯಕದೇವನೊಡನೆ ವಾದಿಸುತ್ತ ಕುಳಿತುಕೊಳ್ಳುವದರಲ್ಲಿ ಅರ್ಥವಿಲ್ಲೆಂದು ಅವಳಿಗೆ ಮನವರಿಕೆಯಾಯಿತು. ನಿಷ್ಠುರರೀತಿಯಿಂದ ಅವನಿಗೆ ಕೃಷ್ಣಸುಂದರಿಯು ಉತ್ತರವನ್ನೀಯತಕ್ಕವಳೇ; ಆದರೆ ವಿಕ್ರಮದೇವನು ಹಾಗೆ ಮಾಡತಕ್ಕದ್ದಲ್ಲವೆಂದು ಅವಳಿಗೆ ಕಟ್ಟು ಮಾಡಿದ್ದನು. ಈ ಪ್ರಕಾರದ ಕಾರಸ್ಥಾನವನ್ನು ರಚಿಸುವದರಲ್ಲಿ ವಿಕ್ರಮದೇವನ ಸ್ವಾರ್ಥವೇನಿತ್ತೆಂಬದು ಪ್ರಸಂಗಾನುಸಾರವಾಗಿ ವಾಚಕಮಹಾಶಯರ ಲಕ್ಷ್ಯದಲ್ಲಿ ಬರಬಹುದು.

ರಾಜಕುಮಾರನು ವಿಷಯಲಾಲಸೆಯ ಮೃಗಜಲದ ಬೆನ್ನು ಹತ್ತಿ ರಾಜಕಾರಣದ ಕಡೆಗೆ ದುರ್ಲಕ್ಷಿಸುತ್ತಿರುವದು ರಾಮದೇವನ ಮನಸ್ಸಿಗೆ ಬರಲಿಲ್ಲ. ಬಾಮನೀಬಾದಶಹನ ವಿರುದ್ಧವಾಗಿ ಸಾಣ್ಯ ಕರಗಿಸುವ ಕಾರ್ಯವನ್ನಾರಂಭಿಸಿ, ಭಾವೀಯುದ್ಧದ ಸಿದ್ಧತೆಯನ್ನು ಮಾಡದೆ ತಟಸ್ಥವೃತ್ತಿಯನ್ನು ತಾಳಿದ್ದು ನೋಡಿ, ಅವನು ರಾಜಕುಮಾರನನ್ನು ಮನಸಾ ನಿಂದಿಸತೊಡಗಿದನು. ಪ್ರಸಂಗವೊದಗಿದಾಗ ಚನ್ನಾಗಿ ಬುದ್ಧಿಗಲಿಸಬೇಕೆಂದು ಅವನು ನಿರ್ಧರಿಸಿಕೊಂಡನು. ಅವನ ಈ ಹುಚ್ಚಾಟಕ್ಕೆ ಉತ್ತೇಜನ ಕೊಡುವ ವಿಕ್ರಮದೇವನ ವಿಷಯದಲ್ಲಿ ರಾಮು

ದೇವನಿಗೆ ಅನಾದರ ಬುದ್ಧಿಯು ಹುಟ್ಟಿತು.

ಕೃಷ್ಣಸುಂದರಿಯು ಮಾತು ಮುಗಿಸಿದ್ದರಿಂದ ವಿನಾಯಕದೇವನು ನಿರುತ್ತರನಾದನು. ಸೋಮಲದೇವನು ಮಾತ್ರ ಮಗಳ ಮೇಲೆ ಕೋಪಗೊಂಡನು. ಸಾರ್ವಭೌಮರಾಜಕುಮಾರನನ್ನು ವರಿಸಿ ಸುಖಬಡುವದು ಇವಳ ಪ್ರಾರಬ್ಧದಲ್ಲಿಲ್ಲವೆಂದು ಮನಸ್ಸಿನಲ್ಲಿ ನೊಂದುಕೊಂಡನು; ಆದರೆ ಬಹಿರಂಗದಲ್ಲಿ ತನ್ನ ಮನಸ್ಥಿತಿಯನ್ನು ತೋರಗೊಡದೆ:—

"ಕೃಷ್ಣೇ, ಏನೂ ಚಿಂತೆಯಿಲ್ಲ. ಸಂಪೂರ್ಣವಾಗಿ ವಿಚಾರಿಸಿದರೆ ರಾಜಕುಮಾರರ ಧರ್ಮಪತ್ನಿಯಾಗುವದು ಎಷ್ಟು ಸೌಖ್ಯಕರವೆನ್ನುವದು ನಿನ್ನ ನಿದರ್ಶನಕ್ಕೆ ಬರುವದು. ನಮ್ಮಂತಹ ಸಾಮಾನ್ಯ ಜನರಿಗೆ ಇಂತಹ ಸುಸಂಧಿಯು ಪ್ರಾಕ್ತನ ಸುಕೃತಿಯಿಂದಲೇ ಒದಗಿ ಬಂದಿರುವದಲ್ಲದೆ, ಸಾಧಾರಣ ಪ್ರತಿಯ ಜನರಿಗೆ ಲಭಿಸತಕ್ಕದ್ದೇ?"

"ನಿಜವಾದ ಮಾತನಾಡಿದಿರಿ. ಸೋಮಲದೇವ, ಕೃಷ್ಣಸುಂದರಿಯಾದರೂ ಈಗ 'ನಕಾರಾ'ರ್ಥಕ ಉತ್ತರವನ್ನೆಲ್ಲಿ ಕೊಟ್ಟಿರುವಳು? ವಿವಾಹದಂತಹ ಆಜನ್ಮ ಬಂಧನಗಳಿಗೊಳಗಾಗಬೇಕಾದರೆ ಸಾರಾಸಾರ ವಿಚಾರ ಮಾಡಬೇಕಾಗುವದೆಂಬ ಪರಂಪರಾಗತ ಆಚರಣೆಯನ್ನೇ ಅವಳು ಅನುಕರಿಸಿರುವಳು. ಸಾವಧಾನದಿಂದ ವಿಚಾರಿಸಿ ಹೇಳಲಿ. ಈ ಮಾತಿನಲ್ಲಿ ವಿಶೇಷವಾಗಿ ಅವಸರ ಮಾಡುವ ಕಾರಣವಿಲ್ಲ."

ವಿಕ್ರಮದೇವನು ಹೀಗೆ ನುಡಿದ ಕೂಡಲೆ ವಿನಾಯಕದೇವನ ನಿರಾಶೆಯಲ್ಲಿ ಆಶಾಂಕುರವು ಹುಟ್ಟಿತು. ಅವನು ಕೃಷ್ಣಸುಂದರಿಯನ್ನು ಪ್ರೇಮಳದೃಷ್ಟಿಯಿಂದ ನೋಡತೊಡಗಿದನು. ಆನಂದಭರದಿಂದ ಉನ್ಮತ್ತನಾದ ಅವನು:—

"ಕೃಷ್ಣೇ, ನೀನು ಗುಣಗ್ರಾಹಿಯಿರುವೆ. ಭಾವೀಸಾಮ್ರಾಜ್ಞಿಪದದ ಸಿಂಹಾಸನದಲ್ಲಿ ಯಾವ ಯಾವ ಸುಖ ಸೌಕರ್ಯಗಳು ಲಭಿಸುತ್ತವೆಂಬದನ್ನು ಸುಜ್ಞಳಾದ ನಿನ್ನೆದುರಿನಲ್ಲಿ ವಿಶದೀಕರಿಸಿ ಹೇಳುವ ಕಾರಣವಿಲ್ಲ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಒಬ್ಬ ಸಾರ್ವಭೌಮ ರಾಜಕುಮಾರನ ಪಂಚಪ್ರಾಣಗಳು ನಿನ್ನ ಕೈಯಲ್ಲಿರುವವೆಂಬದನ್ನು ದೃಢವಾಗಿ ನಂಬು."

ರಾಜಕುಮಾರನ ಮಾತುಗಳನ್ನು ಕೇಳಿ ಕೋಮಲ ಹೃದಯದ ಕೃಷ್ಣಸುಂದರಿಯು ಅಂತಃಕರಣವು ಕರಗಿ ನೀರಾಯಿತು. ತನ್ನ ಸಲುವಾಗಿ ರಾಜಕುಮಾರನು ತನ್ನ ಪ್ರಾಣವನ್ನೇ ಸಮರ್ಪಿಸಲು ಸಿದ್ಧನಾದದ್ದು ನೋಡಿ, ಅವಳಲ್ಲಿ ವಿವೇಕೋದಯವಾಯಿತು. ವಿಕ್ರಮದೇವನ ಮಾತಿನಂತೆ ನಡೆದು, ನಿಜಸಂಗತಿಯನ್ನು ಬಚ್ಚಿಟ್ಟು, ಅವನನ್ನು ನಿರರ್ಥಕವಾಗಿ ಗೊಂದಲದಲ್ಲಿ ಕೆಡಹಿದ ಬಗ್ಗೆ

ಕೃಷ್ಣಸುಂದರಿಗೆ ಪಶ್ಚಾತ್ತಾಪವಾಯಿತು. ಅತ್ಯಂತ ಆತುರನಾದ ರಾಜಪುತ್ರನಿಗೆ ರಾಜ್ಞೀಪದವನ್ನು ನಿರಾಕರಿಸುವ ಕಾರಣವನ್ನು ಅರುಹಬೇಕೆಂದು ಅವಳ ಮನಸ್ಸಿನಲ್ಲಿ ಹುಟ್ಟಿತು; ಆದರೆ ವಿಕ್ರಮದೇವನು ತನ್ನ ಮೇಲೆ ಕೋಪಗೊಳ್ಳುವನೆಂಬ ಅಂಜಿಕೆಯು ಪರಕ್ಷಣದಲ್ಲಿ ಎದುರಿಗೆ ನಿಂತೊಡನೆಯೆ ಅವಳು ಭಗ್ನಮನೋರಥಳಾದಳು. ವಿಕ್ರಮದೇವನೆದುರಿಗೆ ವಿವಾಹದ ಬಗ್ಗೆ ನಕಾರಾರ್ಥಕ ಉತ್ತರವನ್ನೀಯಬಾರದೆಂದು ವಿಕ್ರಮದೇವನು ಕಟ್ಟು ಮಾಡಿದ್ದರ ಗೂಢವು ಅವಳಿಗೆ ತಿಳಿಯದಾಯಿತು. ಹಾಗೆ ತಿಳಿದಿದ್ದರೆ ಅವಳು ತನ್ನ ಮನೋಗತವನ್ನಾದರೂ ರಾಜಕುಮಾರನೆದುರಿನಲ್ಲಿ ಹೇಳುವದಕ್ಕೆ ಹಿಂದು ಮುಂದು ನೋಡುತ್ತಿರಲಿಲ್ಲ. ರಾಜಕುಮಾರನನ್ನು ಆಶೆಗೊಳಪಡಿಸಿ, ಹಿಂದಿನಿಂದ ಅವನ ಮನೋಭಂಗವನ್ನು ಮಾಡಿದ ದ್ರೋಹಕ್ಕೆ ಗುರಿಯಾಗಬೇಕಾಯಿತೆಂದು ಅವಳಿಗೆ ಬಹಳೇ ಹಳಹಳಿಯೆನಿಸಿತು. ಪ್ರಿಯವಾಚಕಮಹಾಶಯರೇ, ಕೃಷ್ಣಸುಂದರಿಯು ತೆಲಂಗಣದ ರಾಜಕುಮಾರನನ್ನು ನಿರಾಕರಿಸುವ ಕಾರಣವೇನಿರಬಹುದು?

ಇತ್ತ ರಾಜಕುಮಾರನ ಮನಸ್ಸಿನಲ್ಲಿ ಒಂದು ಪ್ರಕಾರದ ಗೊಂದಲವೆದ್ದಿತ್ತು. ಕೃಷ್ಣಸುಂದರಿಯು ಮನಸ್ಸಾದರೂ ವಿಲಕ್ಷಣವಾಗಿ ಹೊಯ್ದಾಡತೊಡಗಿತ್ತು. ಈ ಎಲ್ಲ ಗೊಂದಲಕ್ಕೆ ಮೂಲ ಕಾರಣನು ವಿಕ್ರಮದೇವನೇ ಹೇಗೆಂಬದನ್ನು ಪ್ರಸಂಗಾನುಸಾರವಾಗಿ ನಿದರ್ಶಿಸಬಹುದು.

---

## ಕುಟಿಲ ನೀತಿ.

ವೈಯಕ್ತಿಕ ಸೌಖ್ಯಕ್ಕಾಗಿ ಸ್ವಾರ್ಥಿಗಳು ಎಂಥ ಹೀನ ಕೃತಿಗಳನ್ನಾದರೂ ಮಾಡುವದಕ್ಕೆ ಹೇಸುವದಿಲ್ಲ. ದೇಶದ ಧರ್ಮ, ಸ್ವಾತಂತ್ರ್ಯ, ಸೌಖ್ಯ, ಮೊದಲಾದವುಗಳಿಗೆ ಬಾಧೆ ಬರುವಂತಿದ್ದರೂ ಜಡಸ್ವಾರ್ಥಿಗಳಿಗೆ ಅದರ ಪರಿವೆಯಿರುವದಿಲ್ಲ. ಅನ್ಯರಾಜರ ಕಡೆಗೆ ಒಡೆದು ಹೋಗುವದರಿಂದ ತಾವು ಮಹದೈಶ್ವರ್ಯಸಂಪನ್ನರಾಗುತ್ತೇವೆಂದೂ, ವಂಶಪರಂಪರವಾಗಿ ಸುಖೋಪಭೋಗಗಳನ್ನನುಭವಿಸುವೆವೆಂದೂ ದೇಶದ್ರೋಹಿಗಳು ಎಂಥೆಂಥ ಕೃಷ್ಣಕಾರಸ್ಥಾನಗಳನ್ನು ರಚಿಸಿ, ದೇಶದ ಸ್ಥಿರವಾದ ಹಾನಿಯನ್ನು ಮಾಡಿರುವರೆಂಬದನ್ನು ನೋಡಿದರೆ, ಜಗತ್ತಿನ ಇತಿಹಾಸದಲ್ಲಿ ಭರತಖಂಡದ ಅರ್ವಾಚೀನ ಇತಿಹಾಸವು ಅಗ್ರಸ್ಥಾನವನ್ನು ಪಡೆಯುವದೆಂದು ನಿರ್ಬಾಧಕವಾಗಿ ಹೇಳಬಹುದು. ನೀಚಮನೋವೃತ್ತಿಯ ಜಡಸ್ವಾರ್ಥಿಗಳಿಂದಲೇ ಯವನರು ಹಿಂದುಸ್ಥಾನದಲ್ಲಿ ತಳವೂರಿದರು; ಅಂತಹ ಜನರ ಸಹಕಾರದಿಂದಲೇ ಶತಕಾನುಶತಕಗಳವರೆಗೆ ಭರತಭೂಮಿಯನ್ನು ಏಕ

ಛತ್ರದಿಂದ ಆಳಿದರು; ಅಂತಹ ಜನರ ಲಾಭವನ್ನು ಪಡೆದು ಆಂಗ್ಲರು ಆಸೇತು ಹಿಮಾಚಲದ ವರೆಗೆ ಸಾಮ್ರಾಜ್ಯ ಸತ್ತಾಧಾರಿಗಳಾದರು. ರಾಷ್ಟ್ರಧರ್ಮ ವಿಹೀನರೂ, ಸ್ವಾರ್ಥಸಾಧಕರೂ ಆದ ಜನರ ಕೃಷ್ಣಕೃತಿಯೇ ಇಡೀ ಭರತ ಖಂಡವನ್ನು ದಾಸ್ಯಪಂಕದಲ್ಲಿ ಕೆಡಹಿತು. ಎಲ್ಲಿಯವರೆಗೆ ಸ್ವಧರ್ಮ, ಸ್ವದೇಶ, ಸ್ವಜನ ಮೊದಲಾದವುಗಳ ಬಗ್ಗೆ ಸ್ವಾಭಿಮಾನವು ಜಾಗ್ರತವಿರುವದಿಲ್ಲವೋ ಅಲ್ಲಿ ಯ ವರೆಗೆ ರಾಷ್ಟ್ರದ ನಷ್ಟಚರ್ಯೆಯ ದಿವಸಗಳು ನಾಶವಾಗುವದಿಲ್ಲ. ಜನಾಂಗದಲ್ಲಿ ಎಂದು ಉಜ್ವಲರಾಷ್ಟ್ರಧರ್ಮವು ನೆಲೆಗೊಳ್ಳುವದೋ ಅಂದೇ ಸುದಿನವು ಪ್ರಾರಂಭವಾಯಿತೆನ್ನಬೇಕು; ಅಂದೇ ಭಾಗ್ಯೋದಯಕಾಲವು ಒದಗಿತೆನ್ನಬೇಕು. ಪ್ರಾರಬ್ಧ ಪ್ರಹಾರದಿಂದ ಹತಾಶರಾದ ಜನರಿಗೆ ಆ ಕಾಲವು ಇನ್ನೂ ಎಷ್ಟು ದಿನ ವಿರುವದೆಂಬ ಭವಿಷ್ಯವು ಈಗಾಗಲೆ ಹೇಗೆ ತಿಳಿಯಬೇಕು?

ಸ್ವಜನರ ಸೇವೆಯನ್ನು ನಿಷ್ಠೆಯಿಂದ ಮಾಡಿದರೆ ದೊರೆಯುವ ಪ್ರತಿಫಲಕ್ಕಿಂತ ಅನ್ಯ ಪಕ್ಷಕ್ಕೆ ಒಡೆದು ಹೋಗುವದರಿಂದ ಹೆಚ್ಚಿನ ಲಾಭವು ದೊರೆಯುವದೆಂದು ವಿಕ್ರಮದೇವನ ದುಷ್ಟಬುದ್ಧಿಯು ಅವನಿಗೆ ಹೇಳತೊಡಗಿತ್ತು. ಮಹಮ್ಮದಶಹಾ ಬಹಾಮನಿಗೆ ಸಹಾಯ ಮಾಡಿ ಅವನಿಂದ ಜಹಾಗೀರನ್ನು ಪಡೆಯಬೇಕೆಂಬ ದುಷ್ಟ ಲಾಲಸೆಯು ಅವನಲ್ಲಿ ಹುಟ್ಟಿತ್ತು. ತೆಲಂಗಣದಲ್ಲಿ ಸಂಭವಿಸಿದ ಪ್ರತಿಯೊಂದು ಸಂಗತಿಯನ್ನು ಅವನು ಅತ್ಯಂತ ಗುಪ್ತರೀತಿಯಿಂದ ಶಹನಿಗೆ ತಿಳಿಸುತ್ತಿದ್ದನು. ಹಿಂದೆ ಹೇಳಿದಂತೆ ಅವನೇ ಮಹಮ್ಮದಶಹನಿಗೆ ಪತ್ರ ಕಳಿಸಿದ್ದನು. ಬಹಾಮನೀ ರಾಜ್ಯದ ಚತುಷ್ಕೋಣಾಕೃತಿಯ ನಾಣ್ಯಗಳನ್ನು ವಿನಾಯಕದೇವನು ಕರಗಿಸತೊಡಗಿರುವನೆಂದೂ, ಈ ಕಾರ್ಯದಲ್ಲಿ ರಾಮದೇವನೆಂಬ ಪ್ರಸಿದ್ಧ ಶ್ರೀಮಾನ್ ಗೃಹಸ್ಥನು ಅವನಿಗೆ ಸಹಾಯಕನಿರುವನೆಂದೂ ತಿಳಿಸಿದ್ದನು. ವೇಲಂಪಟ್ಟಣದ ಮೇಲೆ ದಂಡೆತ್ತಿ ಬಂದರೆ ಕೈಲಾದಷ್ಟು ನೆರವಾಗುವೆನೆಂಬದನ್ನಾದರೂ ಅವನಿಗೆ ತಿಳಿಸಿದ್ದನು. ಒಟ್ಟಿನ ಮೇಲೆ ಅವನು ತೆಲಂಗಣದಲ್ಲಿ ನಡೆಯುವ ಯಾವತ್ತು ರಾಜಕಾರಣವನ್ನು ಗುಪ್ತವಾಗಿ ಶಹನಿಗೆ ತಿಳಿಸುತ್ತಿದ್ದನೆಂದು ಒಂದು ಮಾತಿನಲ್ಲಿ ಹೇಳಿಬಿಡುವೆವು.

ಮಾನವ ರಾಕ್ಷಸನಾದ ವಿಕ್ರಮದೇವನು ಆಸುರೀ ಮಹತ್ವಾಕಾಂಕ್ಷಿಯು ಇಷ್ಟರಿಂದಲೇ ತೃಪ್ತಿಯಾಗುವಂತಹದಿರಲಿಲ್ಲ. ರಾಮದೇವನ ಪತ್ನಿಯಾದ ವಿಮಲಾದೇವಿಯ ಸ್ವರ್ಗೀಯ ಸೌಂದರ್ಯಕ್ಕೆ ಅವನು ಮನಸೋತವನಾಗಿದ್ದನು. ನೀಚ ಹೃದಯಿಗಳು ರಾಷ್ಟ್ರಧರ್ಮವನ್ನು ನೋಡುವದಿಲ್ಲ; ಪಿತೃಧರ್ಮವನ್ನು ನಿರೀಕ್ಷಿಸುವದಿಲ್ಲ; ಮಿತ್ರಧರ್ಮವನ್ನು ಪಾಲಿಸುವದಿಲ್ಲ. ನೀಚಮನೋವೃತ್ತಿಯವರಿಗೆ ಸ್ವಾರ್ಥದ ಮುಂದೆ ಎಲ್ಲ ಧರ್ಮಗಳು ಕ್ಷುಪದಾರ್ಥಗಳಾಗಿ ಕಾಣುತ್ತಿ

ದ್ದರೆ ಆಶ್ಚರ್ಯವೇನು? ಅಂತೆಯೇ ಅವನು ವಿಮಲಾದೇವಿಯ ಪ್ರಾಪ್ತಿಗಾಗಿ ಸಾಹಸ ನಡೆಯಿಸಿದ್ದನು. ರಾಮದೇವನ ಜೀವಕ್ಕೆ ಅಪಾಯಮಾಡಿಯಾದರೂ ಈ ಕಾರ್ಯವನ್ನು ನೆರವೇರಿಸಿಕೊಳ್ಳಬೇಕೆಂದು ಮನಸ್ಸಂಕಲ್ಪ ಮಾಡಿಕೊಂಡಿದ್ದನು. ಮಹಮ್ಮದ ಶಹನು ದಂಡೆತ್ತಿ ಬಂದರೆ ವಿನಾಯಕದೇವನಿಗೆ ಯಾವ ರೀತಿಯಿಂದ ಅಪಜಯವು ಒದಗುವದೋ ಆ ಉಪಾಯವನ್ನು ಅವನು ಹುಡುಕುತ್ತಿದ್ದನು. ವಿನಾಯಕದೇವನು ಪರಾಜಿತನಾದರೆ ಬಹಾಮನೀ ಸಿಂಹಾಸನದ ವಿರುದ್ಧವಾಗಿ ವರ್ತನವಿಟ್ಟಿರುವ ರಾಮದೇವಾದಿಗಳಂಥವರಿಗೆ ದೇಹಾಂತ ಶಾಸನವು ವಿಧಿಸಲ್ಪಟ್ಟು ತನಗೆ ಮನಮೋಹಿನಿಯಾದ ವಿಮಲಾದೇವಿಯ ಲಾಭವಾಗುವದೆಂದು ಆ ನರಾಧಮನು ಮನಸ್ಸಿನಲ್ಲಿ ಮಂಡಿಗೆ ತಿನ್ನತೊಡಗಿದ್ದನು. ವಿನಾಯಕದೇವನು ಪೂರ್ಣವಾಗಿ ಪರಾಜಿತನಾದರೆ, ಇಲ್ಲವೆ ಯುದ್ಧದಲ್ಲಿ ಮಡಿದರೆ ನಿಗ್ರಹಾನುಗ್ರಹ ಶಕ್ತಿಯುಳ್ಳ ಮಹಮ್ಮದಶಹನು ತಾನು ಮಾಡಿದ ಉಪಕಾರದ ಪ್ರತಿಫಲವೆಂದು ತೆಲಂಗಣದ ರಾಜ್ಯಪದವನ್ನಾದರೂ ತನಗೆ ಕೊಡಬಾರದೇಕೆ! ಎಂದು ಅವನು ಗಣಿತಶ್ರೇಢಿಯಿಂದ ಲೆಕ್ಕಹಾಕತೊಡಗಿದ್ದನು!

ವಿಕ್ರಮದೇವನ ಪತ್ರಗಳಿಗೆ ಮಹಮ್ಮದಶಹನಿಂದ ಗುಪ್ತವಾಗಿ ಪತ್ರಗಳು ಬರುತ್ತಿದ್ದವು. ಅತ್ಯಂತ ಸಾಹಸ ಮಾಡಿದರೂ ದೊರೆಯಲಾರದಂತಹ ಗೃಹಭೇದಕನು ದೊರೆತದ್ದರಿಂದ ಅವನಿಗೆ ಮಹದಾನಂದವೆನಿಸಿತ್ತು. ವಿಕ್ರಮದೇವನಿಗೆ ಮತ್ತಿಷ್ಟು ಆಶೆ ಹಚ್ಚಿ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂಬದನ್ನು ಆ ದೂರದರ್ಶಿಯು ತಿಳಿದವನಾಗಿದ್ದನು. ತೆಲಂಗಣ ಪ್ರಾಂತದಲ್ಲಿ ಬಹಾಮನೀ ಸಿಂಹಾಸನದ ವಿಷಯಕ್ಕೆ ನಿಷ್ಠೆಯುಳ್ಳವರು ದೊರೆತುದರಿಂದ ತನಗೆ ಪರಮಾನಂದವಾಗಿರುವದೆಂದೂ, ಸಮಯವೊದಗಿದರೆ ಹಾಗು ಅಲ್ಲಾನ ಕೃಪೆಯಾದರೆ ತೆಲಂಗಣದ ರಾಜ್ಯಾಧಿಕಾರವನ್ನು ಹೊಂದುವ ಭಾಗ್ಯವಾದರು ಲಭಿಸುವದೆಂದೂ ಮಹಮ್ಮದಶಹನು ವಿಕ್ರಮದೇವನಿಗೆ ತಿಳಿಸಿದ್ದನು. ಇಂತಹ ಭವಿತ್ಕಾಲೀನ ಸುವರ್ಣಸಂಧಿಯನ್ನು ಶಕ್ಯವಿದ್ದಷ್ಟು ಬೇಗನೆ ಸಾಧಿಸುವದಕ್ಕೆ ವಿಕ್ರಮದೇವನು ಹಿಂಜರಿಯುವನೇ?

ಕಪಟಪ್ರಯೋಗದಲ್ಲಿ ವಿಕ್ರಮದೇವನು ನಿಷ್ಣಾತನಿದ್ದನೆಂದು ಹೇಳಬಹುದು. ತಾನು ಕೈಕೊಂಡಿರುವ ಹೀನಕಾರ್ಯದ ದುರ್ಗಂಧವು ಯಾರಿಗೂ ತಗಲಕೂಡದಂತೆ ಅವನು ಪೂರ್ಣ ಜಾಗೃತೆಯಿಂದ ನಡೆಯುತ್ತಿದ್ದನು. ಕೃಷ್ಣಸುಂದರಿಯು ವಿನಾಯಕದೇವನ ವಿಷಯಕ್ಕೆ ಪ್ರೇಮವಿಲ್ಲದವಳಾದಾಗ್ಯೂ, ರಾಜಕುಮಾರನಿಗೆ ನಕಾರಾರ್ಥಕವಾದ ಉತ್ತರವನ್ನೀಯಬಾರದೆಂದು ಅವನು ಅವಳಿಗೆ ತಿಳಿಸಿದನು. ಹಾಗೆ ಹೇಳುವದರಿಂದ ಅವನ ಮನಸ್ಸಿಗೆ ಬಲವಾದ ಗಾಯವಾಗಿ

ಪ್ರಾಣವನ್ನು ಸಹ ತ್ಯಜಿಸುವದಕ್ಕೆ ಸಿದ್ಧನಾಗುವನೆಂದು ವಿಕ್ರಮದೇವನು ಅವಳಿಗೆ ತಿಳಿಸಿದ್ದನು. ಹೀಗೆ ಕಪಟವ್ಯೂಹವನ್ನು ರಚಿಸುವದರಲ್ಲಿ ಅವನ ಉದ್ದೇಶವು ಇದ್ದೇ ಇತ್ತು. ಕುಮಾರಿಯು ವ್ಯಾಮೋಹದಲ್ಲಿ ಶಿಲುಕಿ, ರಾಜಕುಮಾರನು ರಾಜಕಾರ್ಯದ ಕಡೆಗೆ ದುರ್ಲಕ್ಷ್ಯ ಮಾಡುವನೆಂದೂ, ಹಾಗಾದರೆ ತನ್ನ ಕಾರ್ಯವು ಅಲ್ಪ ಶ್ರಮದಿಂದ ಈಡೇರುವದೆಂದೂ ಅವನು ಭಾವಿಸಿದ್ದನು. ಸ್ತ್ರೀಯರಲ್ಲಿ ನೈಸರ್ಗಿಕವಾಗಿ ವಾಸಿಸುತ್ತಿದ್ದ ಲಜ್ಜೆಯ ಪ್ರಭಾವದಿಂದಲೇ ಕುಮಾರಿಯು ಒಮ್ಮೆಲೇ ಸಮ್ಮತಿಯನ್ನೀಯಲಾರದವಳಾಗಿರುವಳೆಂದೂ, ದಿನದಿನಕ್ಕೆ ತಾನೇ ಕೈಯಲ್ಲಿ ಬರುವಳೆಂದೂ, ಅಂತರಂಗದಲ್ಲಿ ನಿಮ್ಮ ವಿಷಯಕ್ಕೆ ಅವಳಲ್ಲಿ ಅದ್ವಿತೀಯ ಪ್ರೇಮವು ನೆಲೆಗೊಂಡಿರುವದೆಂದೂ ಅವನು ರಾಜಕುಮಾರನಿಗೆ ನಿರರ್ಥಕವಾಗಿ ಆಶೆ ಹಚ್ಚುತ್ತಲಿದ್ದನು. ಕೃಷ್ಣಸುಂದರಿಯಾದರೊ ಮತ್ತೊಬ್ಬ ರಜಪೂತ ಸರದಾರನಲ್ಲಿ ಅನುರಕ್ತಳು. ಕುಲಯುವತಿಯರು ಒಮ್ಮೆ ಹೃದಯದಲ್ಲಿ ಒಬ್ಬ ಪುರುಷನಿಗೆ ಸ್ಥಳವಿತ್ತ ಮೇಲೆ ಅನ್ಯವಿಚಾರಗಳಿಗೆ ಒಳಗಾಗುವರೇ? ಅಂಥ ಸಾಧ್ವೀಮಣಿಗಳ ಮನಸ್ಸನ್ನು ಹಿಂದುಗಡೆಯಿಂದ ತಿರುಗಿಸುವದಕ್ಕೆ ಯಾರು ತಾನೆ ಸಮರ್ಥರಾಗುವರು? ರಾಜ್ಞೀಪದದ ದುರಾಶೆಯಿಂದಾಗಲಿ, ಅಷ್ಟೈಶ್ವರ್ಯಗಳ ಲೋಭಕ್ಕಾಗಲಿ, ಮನ್ಮಥಸಮರೂಪದ ವ್ಯಾಮೋಹಕ್ಕಾಗಲಿ ಇನ್ನುಳಿದ ಸೌಖ್ಯ ಸಿರಿ-ಸಂಪದಗಳ ಇಚ್ಛೆಯಿಂದಾಗಲಿ ಅವರು ಶೀಲಚ್ಯುತರಾಗುವದಿಲ್ಲವೆಂಬ ಮಾತು ವಿಕ್ರಮನಂತಹ ನೀಚಹೃದಯಿಗೂ ತಿಳಿದಿತ್ತು; ಆದರೆ ವಸ್ತುಸ್ಥಿತಿಯನ್ನು ರಾಜಕುಮಾರನೆದುರಗೆ ಉಸುರಿ ಅವನನ್ನು ಪರಾಙ್ಮುಖನನ್ನಾಗಿ ಮಾಡಿದ್ದರೆ, ಅವನು ಮಾನವಕೋಟಿಯಲ್ಲಿ ಸಮಾವೇಶವಾಗುತ್ತಿದ್ದನು. ಅವನ ಮನೋಮಂದಿರದ ತಳಹದಿಯು ಬೇರೆ ಪ್ರಕಾರದ್ದಿದ್ದುದರಿಂದ, ಆ ಜಡಸ್ವಾರ್ಥಿಯು ತನ್ನ ಕಾರ್ಯಕ್ಕೆ ಅನುಕೂಲವಾದ ರೀತಿಯಿಂದ ಭೂಮಿಕೆಗಳನ್ನು ರಚಿಸಹತ್ತಿದ್ದನು.

ಕರ್ನಾಟಕ ತೆಲಂಗಣಗಳ ರಾಯಭಾರಿಗಳಿಗೆ ಅಪಮಾನ ಮಾಡಿದ್ದು ವಿನಾಯಕದೇವರ ಸ್ವಾಭಿಮಾನ ಪೂರಿತ ಹೃದಯಕ್ಕೆ ಅಸಹ್ಯವಾದ ವೇದನೆಯನ್ನುಂಟು ಮಾಡಿತ್ತು. ಬುಕ್ಕರಾಯನಾದರೂ ಶಪನಮೇಲೆ ಹಲ್ಲು ಕಡಿಯತೊಡಗಿದ್ದನು. ಅವರು ಯುದ್ಧದ ಸಿದ್ಧತೆಯನ್ನು ಮಾಡತೊಡಗಿದರು. ಬುಕ್ಕರಾಯನ ಸಹಾಯವು ದೊರೆತರೆ ವಿನಾಯಕದೇವನು ಒಂದುವೇಳೆ ಪರಾಭೂತನಾಗಲಿಕ್ಕಿಲ್ಲೆಂದು ವಿಕ್ರಮದೇವನು ಚಿಂತಿಸತೊಡಗಿದನು. ಆದಷ್ಟು ಬೇಗನೆ ಯುದ್ಧವನ್ನು ಹೂಡಿ ಕುಟಿಲ ನೀತಿಯಿಂದ ತನ್ನ ಮನೋಗತವನ್ನು ಈಡೇರಿಸಿಕೊಳ್ಳಬೇಕೆಂದು ಅವನು ಹಾತೊರೆದನು. ವಿನಾಯಕದೇವನು ಕೈಲಾಸ ಪ್ರಾಂತದ

ಮೇಲೆ ದಂಡೆತ್ತಿ ಹೋಗಬೇಕೆಂದು ಮಾಡಿದ ಯೋಚನೆಯನ್ನು ಅವನು ಅಲ್ಲಿಯ ಸಭೇದಾರನಾದ ಬಹಾದ್ದೂರ ಶಹನಿಗೂ, ಮಹಮ್ಮದಶಹನಿಗೂ ತಿಳಿಸಿದ್ದನು. ಯುದ್ಧದ ಪ್ರಸಂಗದಲ್ಲಿ ಶಕ್ಯವಿದ್ದಷ್ಟು ಪರಕೀಯರಿಗೆ ಅನುಕೂಲವಾಗುವದನ್ನು ಅವನು ನಿರ್ಧರಿಸಿಕೊಂಡಿದ್ದನು. ಹೀಗೆ ಕುಟಿಲ ನೀತಿಯಿಂದ ನಡೆದು, ಅವನು ತೆಲಂಗಣದ ಸಿಂಹಾಸನಕ್ಕೆ ಒಡೆಯನಾಗಬೇಕಾಗಿತ್ತು! ವಿಮಲಾದೇವಿಯ ಶೀಲ ವನ್ನು ಸೂರೆಗೈಯಬೇಕಾಗಿತ್ತು!

ಮನುಷ್ಯನು ಒಮ್ಮೆ ಜಡಸ್ವಾರ್ಥದ ಹಂಬಲಕ್ಕೆ ಬಿದ್ದನೆಂದರೆ ಎಲ್ಲ ಧರ್ಮಗಳನ್ನು ಬದಿಗಿರಿಸಿ ಎಂತಹ ಅಧೋಗತಿ ಸಾಧನದ ಕರ್ಮಗಳನ್ನಾದರೂ ಮಾಡಲಿಕ್ಕೆ ಪ್ರವೃತನಾಗುತ್ತಾನೆ. ಅದರ ಪರಿಣಾಮವು ಏನಾದೀತೆಂಬದರ ಆಲೋಚನೆಯನ್ನು ಅವನು ಮಾಡುವದಿಲ್ಲ. ವಿಕ್ರಮದೇವನಾದರೂ ಇದೇ ಕೋಟಿ ಯೊಳಗಿನವನಿದ್ದನು. ಬೇಕಾದಂತಹ ಹೀನಕಾರ್ಯಗಳನ್ನು ಮಾಡಿಯಾದರೂ ತನ್ನ ಮನೋದ್ದೇಶವನ್ನು ಪೂರ್ತಿಗೊಳಿಸಬೇಕೆಂದು ಯೋಚಿಸಿದ್ದನು. ತನ್ನ ಈ ದುಷ್ಕೃತಿಯಿಂದ ಸ್ವಜನರ ಪರಿಣಾಮವೇನಾದೀತು, ಸ್ವರಾಜ್ಯದ ಸ್ಥಿತಿಯು ಹೇಗಾದೀತು, ಸ್ವಧರ್ಮದ ಅವಸ್ಥೆಯು ಯಾವಗತಿಯನ್ನು ಹೊಂದೀತು, ಮೊದ ಲಾದವುಗಳ ಭಯವು ಅವನನ್ನು ಸೋಂಕಲೇ ಇಲ್ಲ. ಓರ್ವ ಅಬಲೆಯ ಪಾತಿವ್ರತ್ಯ ಭಂಗಮಾಡಲುದ್ಯುಕ್ತನಾಗಿದ್ದ ಅವನ ಮನಸ್ಸು ಲೋಕಾಪವಾದ ಕ್ಕಾಗಲಿ,ಪಾತಕಕ್ಕಾಗಲಿ, ದುಷ್ಕೀರ್ತಿಗಾಗಲಿ ಅಂಜಲಿಲ್ಲ. ಇಂತಹ ನರಾಧಮರು ದೇಶಕ್ಕೆ ಕಂಟಕಪ್ರಾಯರಾಗಿ ಸರ್ವನಾಶ ಮಾಡುವದರಲ್ಲಿ ಸಂದೇಹವೇ ಇಲ್ಲ. ಇಂಥ ಮಹಾಪುರುಷರು! ಎಂದು ನಿರ್ನಾಮವಾಗುವರೋ ಅಂದೇ ಭಾಗ್ಯೋ ದಯಕಾಲವು ಒದಗಿತೆನ್ನಬೇಕು. ಪ್ರಾರಬ್ಧಪ್ರಹಾರದಿಂದ ಘಾಸಿಯಾದ ಜನಾಂ ಗವು ಅಂತಹ ಕಾಲವನ್ನು ಎಂದು ಕಾಣುವದೆಂಬದು ಹೇಗೆ ತಿಳಿಯಬೇಕು?

---

## ದೀನ-ದೀನ!

"ಬ್ರಹ್ಮಾಮನೀ ರಾಜನ ವೈರ ಬಳಿಸಬೇಡವೆನ್ನುವೆನೇ ಸ್ವಾಭಿಮಾನಶೂನ್ಯಳೆನ್ನು ವಿರಿ; ಗೋಮುಖವ್ಯಾಘ್ರನಂತಿರುವ ವಿಕ್ರಮದೇವನ ಸ್ನೇಹ ಬಿಡಿರೆನ್ನುವೆನೇ ಮಿತ್ರಭೇದಿಯೆನ್ನುವಿರಿ."

ವಿಮಲಾದೇವಿಯು ಪತಿಯಾದ ರಾಮದೇವನೊಡನೆ ಮಾತನಾಡುತ್ತ ಸೌಧಾಗ್ರದಲ್ಲಿ ಕುಳಿತಿದ್ದಳು. ವಿನಾಯಕದೇವನು ಕೈಲಾಸಪ್ರಾಂತದ ಮೇಲೆ ದಂಡೆತ್ತಿ ಹೋಗಿದ್ದು, ಅವನು ಬಹಾದ್ದೂರಶಹನ ಸೇನಾಬಲಕ್ಕೆ ಹಣ್ಣಾಗಿರುವ

ಸುದ್ದಿಯು ಬಂದಿತ್ತು. ಒಂದು ವೇಳೆ ಅವನು ಪರಾಜಿತನಾದರೆ ಒಹಾಮನೀ ನಾಣ್ಯಗಳನ್ನು ಕರಗಿಸಲು, ಮುಂದುವರಿದ ಜನರಿಗೆ ಘೋರ ಶಾಸನ ದೊರೆಯದಿರ ದೆಂದು ಅವಳ ಮನವರಿಕೆಯಾಗಿತ್ತು. ವಿಕ್ರಮದೇವನ ಕಾರಸ್ಥಾನವನ್ನು ಅವಳು ತಿಳಿದಿರದಿದ್ದರೂ ಅವನಹೃದಯವು ವಿಷಭರಿತವಿರುವದೆಂಬದನ್ನು ಅರಿಯದಷ್ಟು ಅವಳು ಅದೂರದರ್ಶಿಯಿರಲಿಲ್ಲ. ಬೆಳ್ಳಗಿದ್ದದ್ದನ್ನು ಹಾಲೆಂದು ನಂಬುವಂತಹ ರಾಮದೇವ-ವಿನಾಯಕದೇವರಂತೆ ಮೂಢ ವಿಶ್ವಾಸದವಳು ಅವಳಿದ್ದಿಲ್ಲ. ಅವಳ ಚಾಣಾಕ್ಷಬುದ್ಧಿಗೆ ಅವನ ಹೃದಯದೊಳಗಿನ ಕೃಷ್ಣಚಿತ್ರವು ಮಸಮಸಕಾಗಿ ಕಾಣತೊಡಗಿತ್ತು; ಆದರೆ ಪತಿಸನ್ನಿಧಿಯಲ್ಲಿ ಸ್ಪಷ್ಟವಾಗಿ ಆಡಿತೋರಿಸುವಷ್ಟು ಪ್ರಬಲವಾದ ಆಧಾರಗಳು ದೊರೆಯದ್ದರಿಂದ ಅವಳು ಮುಗ್ಧಭಾವವನ್ನು ತಳೆದಿದ್ದರೂ, ಅವನ ಸ್ನೇಹವು ಒಳಿತಲ್ಲವೆಂದು ಅನೇಕಸಾರೆ ಹೇಳಿದ್ದಳು. ಅದರಂತೆಯೇ ಮೇಲೆ ಹೇಳಿದಂತೆ ಪತಿಯು ಮುಂದೆ ಮತ್ತೆ ಆಡಿ ತೋರಿಸಿದಳು.

"ಬಹಾಮನೀ ಸಿಂಹಾಸನವನ್ನು ಬೇರುವೆರಿಸಿ ಕಿತ್ತೊಗೆಯಬೇಕೆಂಬ ಮಹತ್ವಾಕಾಂಕ್ಷೆಯುಳ್ಳ ರಾಜಕುಮಾರ ವಿನಾಯಕ ದೇವನಂತಹ ಸದ್ಭಾವನಾ ಪ್ರೇರಿತನಾದ ಸಮ್ರಾಟನ ಆಜ್ಞೆಯನ್ನು ಪಾಲಿಸುವಾಗ ಮರಣ ವೊದಗಿದರೂ ನಾನು ಅಂಜುವದಿಲ್ಲ. ಅನ್ಯಾಯದ ಸಿಂಹಾಸನಗಳು ಅರಕ್ಷಣವಾದರೂ ಭೂಮಿಯಲ್ಲಿರಬಾರದೆಂಬ ಮಾತಿಗೆ ಸಮತಾದೃಷ್ಟಿಯ ಜನರು ಒಪ್ಪದಿರುವರೇ? ಹಿಂದುದೇಶಕ್ಕೆ, ಹಿಂದುಧರ್ಮಕ್ಕೆ, ಹಿಂದುಸಂಪದಿಗೆ, ಹಿಂದುಸಂಸ್ಕೃತಿಗೆ ಭಂಗತರುವವರೊಡನೆ ಅಸ್ಥಿಪ್ವೈರ ಬೆಳೆಯಿಸುವದಕ್ಕೆ ಸ್ವಾಭಿಮಾನ ಹೃದಯದವನು ಭಯಭೀತನಾಗುವನೆ? ಇನ್ನು ವಿಕ್ರಮದೇವನ ವಿಷಯಕ್ಕೆ ನಿನ್ನಲ್ಲಿ ಭೇದ ಬುದ್ಧಿಯು ಹುಟ್ಟಿರುವದಲ್ಲವೇ? ಬಾಲ್ಯಸ್ನೇಹಿಯಾದ ಅವನ ಗುಣಗೌರವವನ್ನು ಎಷ್ಟು ಮಾಡಿದರೂ ಕಡಿಮೆಯಿದೆ. ನನ್ನ ವಿಷಯಕ್ಕೆ ಅವನಲ್ಲಿ ಕೀಳುತನದ ಬುದ್ಧಿಯು ಉದಯಿಸುವದು ದೂರತೋಪಾಸ್ತವಿರುವದು. ವಿಮಲೇ, ನಿನ್ನಲ್ಲಿ ಇಲ್ಲದ ವಿಕಲ್ಪವು ಹುಟ್ಟಿದ್ದು ನೋಡಿ ನನಗೆ ಸಖೇದಾಶ್ಚರ್ಯವೆನಿಸುತ್ತಿದೆ."

"ನಂಬಲಾರೆನು; ನೀವು ಏನು ಹೇಳಿದರೂ ಆ ವಿಕ್ರಮದೇವನನ್ನು ನಾನು ನಂಬಲಾರೆನು" ಎಂದು ವಿಮಲಾದೇವಿಯು ನುಡಿದು:— "ದೈವದುರ್ವಿಲಾಸ ದಿಂದ ವಿನಾಯಕದೇವನಿಗೆ ಅಪಜಯವೊದಗಿದರೆ ಬಾಮನೀ ನಾಣ್ಯಗಳನ್ನು ಕರಗಿಸುವ ಕಾರ್ಯದಲ್ಲಿ ತೊಡಗಿದ ನಿಮ್ಮಂಥರಿಗೆ ಕಠಿಣವಾದ ಶಾಸನವು ವಿಧಿಸಲ್ಪಡುತ್ತದೆ" ಎಂದು ಅವಳು ನಿಟ್ಟುಸಿರು ಬಿಟ್ಟಳು.

"ವಿಮಲೇ, ಸ್ವಾಭಿಮಾನ, ಸ್ವದೇಶಾಭಿಮಾನದಿಂದ ರಾಜಾಜ್ಞೆಯಂತೆ ನಡೆಯುವಾಗ ಯಾವ ಬಗೆಯ ಗಂಡಾಂತರಗಳೊದಗಿದರೂ ಅವುಗಳಿಗೆ ಎದೆ

ಗೊಟ್ಟು ನಿಲ್ಲದಿದ್ದರೆ ಗತ್ಯಂತರವಿಲ್ಲ'' ಎಂದು ರಾಮದೇವನು ನುಡಿಯುತ್ತಿರಲು, ಅವನ ಸೇವಕನೊಬ್ಬನು ಅಲ್ಲಿಗೆ ಬಂದು ಕಾತರ ಧ್ವನಿಯಿಂದ: —

''ಒಡೆಯರೇ, ವಿನಾಯಕದೇವ ಮಹಾರಾಜರು ಕೈಲಾಸಪ್ರಾಂತದ ಬಹಾದ್ದೂರ ಶಹನಿಗೆ ಸೋತು ಒಪ್ಪಂದ ಮಾಡಿಕೊಂಡರಂತೆ. ಬಾಮನೀ ನಾಣ್ಯಗಳನ್ನು ಕರಗಿಸುವ ಕಾರ್ಯವನ್ನು ಕೈಕೊಂಡ ಜನರನ್ನು ತನ್ನ ವಶಕ್ಕೆ ಕೊಡಬೇಕೆಂಬ ಕಟ್ಟಳೆಯಿಂದ ಶಹನು ಒಡಂಬಡಿಕೆ ಮಾಡಿಕೊಂಡನಂತೆ! ನೀವು ಇನ್ನು ಇಲ್ಲಿರುವದು ಘಾತುಕವು; ಬೇಗನೆ ಪಾರಾಗಿ ಹೋಗಿರಿ! ಬಹಾದ್ದೂರ ಶಹನು ಈಗಾಗಲೆ ವೇಲಂ ಪಟ್ಟಣದ ಸಮೀಪಕ್ಕೆ ಬಂದಿರಬಹುದು!''

''ಏನು! ವಿನಾಯಕದೇವನು ನಾಣ್ಯ ಕರಗಿಸಿದವರನ್ನು ಬಹಾದ್ದೂರ ಶಹನ ವಶಕ್ಕೆ ಕೊಡಲೊಪ್ಪಿರುವನೇ?''

''ಹೌದು ಸ್ವಾಮೀ!''

''ಪ್ರಿಯೆ, ನೋಡಿದೆಯಾ? ವಿನಾಯಕದೇವನ ರಾಜಧರ್ಮದ ಪಡಿಕಟ್ಟನ್ನು! ಪ್ರಜಾಧರ್ಮವನ್ನು ಯಥಾಸ್ಥಿತವಾಗಿ ಪಾಲಿಸಬೇಕೆಂದು ನಿಷ್ಠೆಯಿಂದ ಕಾರ್ಯಮಾಡುವವರನ್ನು ನರಾಧಮರಾದ ಭೂಪಾಲಕರು ಹೇಗೆ ವಂಚಿಸುತ್ತಿರುವರು ನೋಡಿದೆಯಾ? ಇಂತಹ ದುರ್ಬುದ್ಧಿಯು ನಮ್ಮ ಜನರಲ್ಲಿದ್ದುದರಿಂದಲೆ ಅನ್ಯಧರ್ಮೀಯ ಅರಸರು ನಮ್ಮನ್ನು ಕಾಲಲ್ಲಿ ಹಾಕಿ ತುಳಿಯತೊಡಗಿರುವರು. ಒಡಂಬಡಿಕೆ ಮಾಡಿಕೊಳ್ಳುವಾಗ ಇಂತಹ ಸ್ವಾಭಿಮಾನಶೂನ್ಯತೆಯ ಕಟ್ಟಳೆಗಳಿಗೆ ಒಪ್ಪಿಗೆಯನ್ನೀಯಬೇಕೇ?''

''ವಿನಾಯಕದೇವನ ಹಾಗು ವಿಕ್ರಮದೇವನ ಮಾತಿಗೆ ಮರುಳಾಗಬೇಡಿರೆಂದು ನಾನು ಮೊದಲೇ ಹೇಳಲಿಲ್ಲವೆ? ಸ್ವಜನಾಭಿಮಾನವಿಲ್ಲದವರ ಸಹವಾಸವು ಹೀನವಾದದ್ದು. ಇಂತಹ ಪ್ರಸಂಗವು ಹಿಂದಕ್ಕೆ ಘಟಿಸಿದಾಗ ವಿನಾಯಕದೇವನು ಕೃತಘ್ನತನ ಮಾಡಲಿಲ್ಲವೆ? ಬಾಮನೀ ಬಾದಶಹನು ನಮ್ಮ ಎಲ್ಲ ಸಂಪತ್ತನ್ನು ಸುಲಿದುಕೊಂಡು ಹೋದರೂ ಅವನು ಕಣ್ಣೆತ್ತಿ ನೋಡಲಿಲ್ಲ. ಏನೋ ಈಶ್ವರೀಕೃಪೆಯಿಂದ ಈಗೀಗ ನಾಲ್ಕು ಜನರಲ್ಲಿ ಅಡ್ಡಾಡತೊಡಗಿದ್ದೆವು. ನಮ್ಮ ಏಳ್ಗೆಯು ಮಹಾರಾಜನಿಗೆ ಸಹನವಾಗದೆ, ಅಲ್ಲದ ಉದ್ಯೋಗದಲ್ಲಿ ತೊಡಗಿಸಿ ಈ ರೀತಿಯಾಗಿ ಕರಳಲ್ಲಿ ಕತ್ತರಿಯಾಡಿಸಿದನು. ನೀಚಹೃದಯದ ವಿಕ್ರಮದೇವನು ಪರಮಸ್ನೇಹಿತನೆಂದು ವರ್ಣನೆ ಮಾಡುವಿರಿ. ಅವನಾದರೂ ಈ ಕಾರ್ಯವನ್ನು ಮಾಡುವದಕ್ಕೆ ನಿಮಗೆ ಒಳಿತಾಗಿ ಪ್ರೋತ್ಸಾಹನೆ ಕೊಡಲಿಲ್ಲವೆ? ಬಹಾದ್ದೂರಶಹನು ನಿಮ್ಮನ್ನು ಹಿಡಿದೊಯ್ಯುವಾಗ ವಿನಾಯಕದೇವನಾಗಲಿ, ವಿಕ್ರಮದೇವನಾಗಲಿ ನಿಮ್ಮನ್ನು ಗಂಡಾಂತರದಿಂದ ಪಾರು ಮಾಡುವದಕ್ಕೆ

ಯತ್ನಿಸುವರೆಂದು ತಿಳಿದಿರುವಿರೇನು? ಸಾಧುಭಾವದವರಾದ ನಿಮ್ಮನ್ನು ಗಂಡಾಂತರದಲ್ಲಿ ಕೆಡಹಿ ಚಮತ್ಕಾರವನ್ನು ನೋಡುವದಕ್ಕೆ ಮಾತ್ರ ಅವರು ಸಿದ್ಧರಿರುತ್ತಾರೆ. ನಮ್ಮ ಪ್ರಾರಬ್ಧಪ್ರಹಾರದಿಂದ ನಾವು ಹತಾಶರಾಗಬೇಕಾಗಿದೆ! ಸುಮ್ಮನೆ ಎರಡನೇಯವರಿಗೇಕೆ ದೋಷ ಕೊಡಬೇಕು? ಎಂದು ಸಜಲನೇತ್ರೆಯಾಗಿ ವಿಮಲಾದೇವಿಯು ನುಡಿದಳು.

"ವಿಮಲೆ! ಬಾಮನೀ ಸಾಣ್ಯಗಳನ್ನು ತೆಲಂಗಣದಲ್ಲಿ ನಡೆಯಗೊಡಬಾರದೆಂದು ವಿನಾಯಕದೇವನು ನಿಶ್ಚಯಿಸಿದ್ದು ಯೋಗ್ಯವಿರುವದು. ಎಂತಹ ಪ್ರಸಂಗವೊದಗಿದರೂ ಈ ಕೆಲಸವನ್ನು ಪೂರ್ತಿಗೊಳಿಸಿ ಯಶಸ್ಸಂಪಾದನೆ ಮಾಡಬೇಕಾಗಿತ್ತು. ಜಯಾಪಜಯಗಳು ದೈವಾಧೀನವಿದ್ದುದರಿಂದ ಅಪಜಯ ಹೊಂದಿದ್ದಕ್ಕಾಗಿ ನಾನು ಅವನಿಗೆ ಮಾತು ಕೊಡುವದಿಲ್ಲ ಹೇರಳವಾಗಿ ಕಪ್ಪುಕಾಣಿಕೆಗಳನ್ನರ್ಪಿಸಿ ಪಾರಾಗುವದನ್ನು ಬಿಟ್ಟು ಇಂತಹ ಹೇಸಿತನದ ಕಾರ್ಯ ಮಾಡಿದ್ದರಿಂದ ನನ್ನ ತಲೆಯು ತಿರುಗಿರುವದು. ಆಗಲಿ! ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ಇನ್ನು ಮೇಲೆ ಅಟ್ಟದ್ದುಣ್ಣದಿದ್ದರೆ ಬಿಟ್ಟದ್ದೆ?"

"ಒಡೆಯರೇ, ನೀವು ಬೇಗನೆ ಇಲ್ಲಿಂದ ದಾಟಿರಿ. ಬಹಾದ್ದೂರಶಹನ ಸೈನ್ಯವು ರಾಜಧಾನಿಯನ್ನು ಸಮೀಪಿಸಿರಬಹುದು. ಕೆಲವು ದಿನಗಳ ವರೆಗೆ ಎಲ್ಲಿಯಾದರೂ ಸುರಕ್ಷಿತವಾದ ಸ್ಥಳದಲ್ಲಿ ಗುಪ್ತರೀತಿಯಿಂದ ಕಾಲಕ್ಷೇಪಮಾಡಿರಿ."

'ಖಾನನ ಸೈನ್ಯವು ಈಗಾಗಲೆ ರಾಜಧಾನಿಯ ಬಳಿಗೆ ಬಂದಿರಬಹುದೇನು?' ಎಂದು ವಿಮಲಾದೇವಿಯು ತನ್ನ ಸೇವಕನನ್ನು ವಿಚಾರಿಸಿದಳು.

"ಅವ್ವನವರೇ, ಈಗ ತೀರ ಸನಿಯಕ್ಕೆ ಬಂದಿರಬಹುದು."

"ನಾಥರೇ, ಏಳಿರಿ! ಬೇಗನೆ ಏಳಿರಿ!! ಕೆಲವು ದಿವಸಗಳ ವರೆಗೆ ವಿಜಯನಗರದಲ್ಲಿ ವಾಸ ಮಾಡಿರಿ. ಅಲ್ಲಿಯೇ ನಿಮಗೆ ಪ್ರಶಸ್ತವೆನಿಸಿದರೆ ನನ್ನನ್ನು ಕರೆಯಿಸಿಕೊಳ್ಳಿರಿ. ಸಾಕು! ಈ ವಿಕ್ರಮನ ಹಾಗು ವಿನಾಯಕದೇವನ ಸಹವಾಸವು ಸಾಕು!!"

"ಏನು? ನನಗೆ ಓಡಿ ಹೋಗುವದಕ್ಕೆ ಹೇಳುವಿಯಾ? ನಾನು ಅಂತಹ ಅಪರಾಧವನ್ನೇನು ಮಾಡಿರುವೆನು? ರಾಜಾಜ್ಞೆಯಂತೆ ನಡೆದದ್ದಕ್ಕೆ ಯಾವ ಪ್ರಾಯಶ್ಚಿತ್ತವೊದಗುವದೋ ಒದಗಲಿ! ಜೀವಗಳ್ಳನಾಗಿ ಓಡಿಹೋಗುವಂತಹ ಹೀನಕೃತಿಯು ನನ್ನಿಂದ ಘಟಿಸಲಾರದು. ಈ ಕಾರ್ಯದಲ್ಲಿ ನಾನು ಅಪರಾಧಿಯೆಂದು ನಿರ್ಣಯಿಸಲ್ಪಟ್ಟು ಶಿಕ್ಷೆಗೆ ಗುರಿಯಾದರೆ ಆ ಪಾತಕವು ವಿನಾಯಕದೇವನಿಗೆ ಕಟ್ಟಿಟ್ಟದ್ದೇ. ಅಂದಮೇಲೆ ಭಯಪಡಲೇಕೆ?"

"ಪ್ರಿಯರೇ, ಈಗ ಧರ್ಮಾಧರ್ಮದ ಹಾಗು ಪಾಪ-ಪುಣ್ಯಗಳ ವಿಚಾರಣೆ

ಮಾಡುತ್ತ ಕುಳಿತುಕೊಳ್ಳಬೇಕಿರಿ. ವ್ಯಥಾ ಸಂಕಟಕ್ಕೀಡಾಗುವದು ಉಚಿತವಲ್ಲ. ನಿಮ್ಮ ವಿಷಯದಲ್ಲಿ ಬಹಾಮನೀ ಬಾದಶಹನು ಕೋಪವುಳ್ಳವನಿರುವನು. ಇದೊಂದು ಪ್ರಸಂಗವು ಅವನ ಕಿವಿಗೆ ಬಿದ್ದಿತೆಂದರೆ ಕಠಿಣವಾದ ಶಾಸನವನ್ನು ವಿಧಿಸಬಹುದು. ದೇಶವು ಇನ್ನೂ ಜಾಗ್ರತಾವಸ್ಥೆಯಲ್ಲಿ ಬಂದಿಲ್ಲ. ದೇಶದಲ್ಲಿ ಐಕ್ಯವು ನೆಲೆಗೊಳ್ಳುವ ವರೆಗೆ ಹಾಗು ಸ್ವಾಭಿಮಾನವು ಜಾಗ್ರತವಾಗುವ ವರೆಗೆ ಯಾವ ದೇಶಕಾರ್ಯಗಳಲ್ಲಿಯೂ ಕೈ ಹಾಕಬಾರದೆಂದು ಅನುಭವಕ್ಕೆ ಬಂದಂತಾಯಿತು. ನೀವು ಈಗಲೇ ಇಲ್ಲಿಂದ ತೆರಳಿರಿ?"

ವಿಮಲಾದೇವಿಯು ಹೀಗೆ ನುಡಿಯುತ್ತಿರಲು, ವೇಲಂ ಪಟ್ಟಣ ರಾಜಧಾನಿಯಲ್ಲಿ ವಿಲಕ್ಷಣವಾದ ಗೊಂದಲವೆದ್ದಿತು. ಯವನ ಸೈನ್ಯವು ರಾಜಧಾನಿಯನ್ನು ಪ್ರವೇಶಿಸಿತೆಂದು ಅವರು ತಿಳಿದುಕೊಂಡರು. ವಿಮಲಾದೇವಿಯಂತೂ ಭಯಭೀತಳಾಗಿ ಕಾತರಧ್ವನಿಯಿಂದ "ಹೂ! ಏಳಿರಿ! ಬೇಗನೆ ಇಲ್ಲಿಂದ ಜಾರಿರಿ!" ಎಂದು ಹೇಳುವಷ್ಟರಲ್ಲಿ ಯವನ ಸೈನಿಕರು:—

"ದೀನ! ದೀನ!!" ಎನ್ನುತ್ತ ರಾಮದೇವನ ಮನೆಯನ್ನು ಪ್ರವೇಶಿಸಿದರು.

---

## ಥೂ! ನಿನ್ನ ಬಾಳ್ವೆಗೆ ಬೆಂಕೀ ಹಚ್ಚಲಿ!!

ವಿನಾಯಕದೇವನು ಕೈಲಾಸಪ್ರಾಂತದ ಮೇಲೆ ದಂಡೆತ್ತಿ ಹೋಗಿದ್ದನು. ಅವನ ನೆರವಿಗೆ ಬುಕ್ಕರಾಯನು ತನ್ನ ವಜ್ರಮುಲ್ಲನೆಂಬ ಸೇನಾಪತಿಯನ್ನು ಕಳುಹಿಸಿದ್ದನು. ವಿಕ್ರಮದೇವನ ಗೃಹಭೇದಿತನದಿಂದ ವಿನಾಯಕದೇವನು ಸೋತು, ಕೈಲಾಸದ ಸುಭೇದಾರನಾದ ಬಹಾದ್ದೂರಶಹನ ಶರಣಾಗತನಾದನು. ಹೇರಳವಾಗಿ ಕಪ್ಪುಕಾಣಿಕೆಗಳನ್ನು ಕೊಡುವದಲ್ಲದೆ, ಬಾಮನೀ ನಾಣ್ಯಗಳನ್ನು ಕರಗಿಸುವ ಕಾರ್ಯದಲ್ಲಿ ತೊಡಗಿದ ಮುಖಂಡರನ್ನು ತನ್ನ ವಶಕ್ಕೆ ಕೊಡಬೇಕೆಂಬ ಕಟ್ಟಳೆಯಿಂದ ಬಹಾದ್ದೂರಶಹನು ವಿನಾಯಕದೇವನೊಡನೆ ಒಪ್ಪಂದ ಮಾಡಿಕೊಂಡನು. ಮಹಮ್ಮದಶಹನ ನಿರೋಧವಾದರೂ ಹೀಗೆಯೇ ಇದ್ದುದರಿಂದ ನಾಣ್ಯ ಕರಗಿಸುವ ಜನರನ್ನು ತನ್ನ ವಶಕ್ಕೆ ಕೊಡಬೇಕೆಂದು ಸುಭೇದಾರನು ಆಗ್ರಹ ತೊಟ್ಟನು. ವಿನಾಯಕದೇವನು ಈ ಮಾತಿಗೆ ಮೊದಲು ಒಪ್ಪದಿದ್ದರೂ ವಿಕ್ರಮದೇವನ ಆಗ್ರಹಕ್ಕಾಗಿ ಒಪ್ಪಿಕೊಳ್ಳಬೇಕಾಯಿತು. ಹಣ ಕರಗಿಸುವವರನ್ನು ಸುಭೇದಾರನ ವಶ ಮಾಡಿದರೆ ಕಾಣಿಕೆಯು ಹಣದಲ್ಲಿ ಕಡಿಮೆ ಕೊಟ್ಟರೂ ನಡೆಯುವದೆಂದು ಅವನು ವಿನಾಯಕದೇವನಿಗೆ ಹೇಳಿ, ಅವನ ಮನಸ್ಸನ್ನು ಸುಭೇದಾರನ ಮಾತಿನಂತೆ ನಡೆಯುವದಕ್ಕೆ ಒಡಂಬಡಿಸಿದನು. ರಾಮದೇವನು ಕಲ

ಬಾಗೇಗೆ ಸೆರೆಯಾಳಾಗಿ ಕಳಿಸಲ್ಪಟ್ಟರೆ ಅವನ ಆಯುಷ್ಯವು ಮುಗಿದಂತಾಗಿ, ದಿವ್ಯ ಲಾವಣ್ಯವತಿಯಾದ ವಿಮಲಾದೇವಿಯು ತನ್ನ ಹಸ್ತಗತವಾಗುವದಕ್ಕೆ ತೊಂದರೆ ಯಿಲ್ಲದಂತಾಗುವದೆಂದು, ನೀಚಸ್ವಾರ್ಥಿಯೂ, ಪಾತಕೀ ಹೃದಯದವನೂ ಆದ ವಿಕ್ರಮದೇವನು ಯೋಚಿಸಿದ್ದನು. ಅವನ ಮನಸ್ಸಿನಂತೆ ಹಣ ಕರಗಿಸುವವರನ್ನು ಬಹಾದ್ದೂರಶಹನ ವಶಕ್ಕೆ ಕೊಡುವದಕ್ಕೆ ವಿನಾಯಕದೇವನು ಒಪ್ಪಿದ್ದರಿಂದ ಅರ್ಧ ಕೆಲಸವಾದಂತಾಯಿತೆಂದು ಅವನು ಸಂಭ್ರಮಗೊಂಡನು.

ಒಪ್ಪಂದವಾದ ಸುದ್ದಿಯನ್ನು ಕೇಳಿ ರಾಮದೇವಾದಿ ಮುಖಂಡ ಜನರು ಅತ್ತಿತ್ತ ಜಾರಿ ಹೋದಾರೆಂದು ತಿಳಿದು, ಧೂರ್ತನಾದ ಬಹಾದ್ದೂರಶಹನು ತನ್ನ ಸೈನ್ಯದೊಳಗಿನ ಕೆಲವು ಜನರನ್ನು ನಾಣ್ಯ ಕರಗಿಸುವ ಮುಖಂಡ ಜನರ ಮನೆಗಳನ್ನು ಮುತ್ತುವದಕ್ಕಾಗಿ ಮುಂದೆ ಕಳುಹಿಸಿದ್ದನು. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ 'ದೀನ, ದೀನ!' ಎನ್ನುತ್ತ ರಾಮದೇವನ ಮನೆಯನ್ನು ಪ್ರವೇಶಿಸಿದವರು ಇವರೇ!

ಬಹಾದ್ದೂರಶಹನ ಆದರಾತಿಥ್ಯದ ವ್ಯವಸ್ಥೆಯು ವಿನಾಯಕದೇವನ ಅರಮನೆಯಲ್ಲಿಯೇ ಮಾಡಲ್ಪಟ್ಟಿತ್ತು. ಆತಿಥ್ಯದ ವ್ಯವಸ್ಥೆಯ ಕಾರ್ಯವು ವಿಕ್ರಮದೇವನ ಕಡೆಗೆ ಒಪ್ಪಿಸಲ್ಪಟ್ಟಿತ್ತು. ಈ ಸಂಧಿಯಲ್ಲಿ ತನ್ನ ಲಾಭವನ್ನು ಸಾಧಿಸಬೇಕೆಂದು ಅವನು ಹೊಂಚು ಹಾಕಿದನು. ವಿಕ್ರಮದೇವನ ಕೃಷ್ಣ ಹೃದಯದ ಪರಿಚಯವು ಬಹಾದ್ದೂರಶಹನಿಗಿದ್ದದರಿಂದ ಅವನು ವಿಕ್ರಮದೇವನ ವಿಷಯಕ್ಕೆ ತಿರಸ್ಕಾರಬುದ್ಧಿಯುಳ್ಳವನಾಗಿದ್ದನು.

ದಿವಾಣಖಾನೆಯಲ್ಲಿ ಬಹಾದ್ದೂರಶಹನೂ, ವಿಕ್ರಮದೇವನೂ ಇಬ್ಬರೇ ಕುಳಿತಿದ್ದರು. ನಾಣ್ಯ ಕರಗಿಸಿದ ನಾಗರಿಕರ ಹೆಸರುಗಳನ್ನು ವಿಕ್ರಮದೇವನು ಸುಭೇದಾರನೆದುರಿನಲ್ಲಿ ಹೇಳತೊಡಗಿದ್ದನು. ಅವನ ಹೇಳಿಕೆಯು ಮೇರೆಗೆ ಎಲ್ಲ ಜನರ ಹೆಸರಗಳನ್ನು ಬರೆದುಕೊಂಡು ಬಹಾದ್ದೂರಶಹನು ಬುದ್ಧಿಪೂರ್ವಕವಾಗಿ:-

"ಸೇನಾಪತಿಗಳೇ, ನೀವು ಕಲಬುರ್ಗೆಯ ಸಿಂಹಾಸನದ ವಿಷಯಕ್ಕೆ ನಿಷ್ಠೆಯುಳ್ಳವರಿರುವಿರೆಂಬ ಮಾತನ್ನು ಜಾದಶಹರವರು ನನಗೆ ತಿಳಿಸಿರುವರು. ನಿಮ್ಮಂತಹ ವಿಶ್ವಸಿಸ್ತ ಜನರ ಸೇವೆಯು ದೊರೆತದ್ದರಿಂದಲೇ ಈ ಯುದ್ಧದಲ್ಲಿ ನಾನು ನಿರಾಯಾಸವಾಗಿ ಜಯಶೀಲನಾದೆನು. ನಿಮ್ಮಂತಹ ಉದಾರ ಹೃದಯದ ಜನರ ಆಶ್ರಯದಿಂದಲೇ ಇಸ್ಲಾಮಿ ರಾಜ್ಯವು ಹಿಂದುಸ್ಥಾನದಲ್ಲಿ ಸ್ಥಾಪಿಸಲ್ಪಟ್ಟಿತು! ನಿಮ್ಮಂತಹ ಗುಣಗ್ರಾಹಿಗಳ ನೆರವಿನಿಂದಲೇ ದಕ್ಷಿಣದಲ್ಲಿ ಮುಹಮ್ಮದೀಯರ ಪ್ರವೇಶವಾಯಿತು! ದಕ್ಷಿಣದ ಎಲ್ಲ ಹಿಂದೂರಾಜರ ಸಿಂಹಾಸನಗಳು ನಾಶವಾಗಿ ಇಸ್ಲಾಮಿ ವರ್ಚಸ್ಸವು ನೆಲೆಗೊಳ್ಳುವ ಮಹತ್ವವಾದ ಕಾರ್ಯವು ನಿಮ್ಮಂತಹ

ಸತ್ಪುರುಷ ಪಾತಿಗಳಾದ ವಿಕ್ರಮಶಾಲಿಗಳ ಸತ್ವವನ್ನೇ ಅವಲಂಬಿಸಿರುವದು. ನಿಮ್ಮ ಪವಿತ್ರವಾದ ಚರಿತ್ರೆಯು ನಮ್ಮ ಬಾದಶಹರಿಂದ ಪೂರ್ಣವಾಗಿ ಗೊತ್ತಾಗಿರುವದು. ಧನ್ಯರು! ಒಂದು ರಾಜ್ಯದ ಅನ್ನವನ್ನುಣ್ಣುತ್ತ ಮತ್ತೊಬ್ಬ ರಾಜನಿಗೆ ನೆರವಾಗುವ ಪರೋಪಕಾರ ಬುದ್ಧಿಯುವರಾದ ನೀವು ಪರಮ ಧನ್ಯರು!''

ಬಹಾದ್ದೂರಶಹನ ಮಾತಿನ ಮರ್ಮವು ವಿಕ್ರಮದೇವನಿಗೆ ತಿಳಿಯಲಿಲ್ಲ. ಅವನು ತನ್ನನ್ನು ಸಂಭಾವಿಸತೊಡಗಿರುವನೆಂದು ಆ ಬುದ್ಧಿಗೇಡಿಯು ತಿಳಿದುಕೊಂಡು ಒಳಿತಾಗಿ ಉಬ್ಬಿದನು. ಆನಂದದ ಭರದಲ್ಲಿ ಅವನು ತನ್ನನ್ನು ತಾನೇ ಮರೆತು ಏನೇನೋ ಬಡಬಡಿಸತೊಡಗಿದನು. ಮಹಮ್ಮದಶಹನಿಂದ ತನಗೆ ಯಾವದೊಂದು ಪ್ರಾಂತವು ಪಾರಿತೋಷಕವಾಗಿ ದೊರೆಯಬಹುದೇನೆಂದು ಅವನು ಕೇಳತೊಡಗಿದ್ದನು. ಆಗ ಬಹಾದ್ದೂರಶಹನು ಅವನನ್ನು ಮತ್ತಿಷ್ಟು ಉಬ್ಬಿಸಬೇಕೆಂದು:—

"ಸೇನಾಪತಿಗಳೇ, ತೆಲಂಗಣದ ರಾಜ್ಯವನ್ನು ವಶಮಾಡಿಕೊಳ್ಳುವ ಕಾರ್ಯದಲ್ಲಿ ನೀವು ಒಳ್ಳೆಯ ಸಾಹಸ ಮಾಡಿದರೆ ಈ ರಾಜ್ಯಕ್ಕೆ ನೀವೇ ಒಡೆಯರಾಗುವಿರೆಂದು ದೃಢಪಡಿಸಿಕೊಳ್ಳಿರಿ. ನಮ್ಮ ಬಾದಶಹರು ಹಿತಕರ್ತರ ಉಪಕಾರವನ್ನು ಎಂದೂ ಇಟ್ಟುಕೊಳ್ಳತಕ್ಕವರಲ್ಲ.''

"ಈ ಮಾತು ನನಗೆ ಅವಗತವಿದ್ದದರಿಂದಲೇ ಮಹದಾಶ್ರಯವನ್ನು ಸಂಪಾದಿಸಿರುವೆನು'' ಎಂದು ವಿಕ್ರಮದೇವನು ನುಡಿದು ತತ್ತರಿಸುವ ಮಾತನಿಂದ:

"ಇನ್ನೊಂದು ಸಂಗತಿಯನ್ನು ನಿಮಗೆ ತಿಳಿಸುವದಿರುವದು. ನೀವು ಕೇವಲ ನನ್ನವರಿರುವಿರಾದ್ದರಿಂದ ನನ್ನ ಹೃದ್ಗತವನ್ನು ಹೇಳುವದಕ್ಕೆ ಅಡ್ಡಿ ಇಲ್ಲದಿದ್ದರೂ ಶಿಷ್ಟಾಚಾರದಂತೆ ನಿಮ್ಮ ಒಪ್ಪಿಗೆಯನ್ನು ಕೇಳುವೆನು.''

"ಓಹೋ! ಏನೂ ಅಡ್ಡಿಯಿಲ್ಲ; ಅಗತ್ಯವಾಗಿ ತಿಳಿಸಿರಿ.''

"ರಾಮದೇವನಲ್ಲಿ ವಿನಾಯಕ ದೇವನು ಒಳ್ಳೇ ಪ್ರೇಮವುಳ್ಳವನಿರುವನು. ಬಾದಶಹರ ಬಳಿಗೆ ಅವನನ್ನು ಒಯ್ಯುವದಕ್ಕೆ ಅವನು ನಿಮಗೆ ಅಡ್ಡಿಮಾಡಬಹುದು; ಅವನೊಬ್ಬನನ್ನಾದರೂ ಮುಕ್ತಮಾಡುವದಕ್ಕಾಗಿ ನಿಮಗೆ ಬೇಡಿಕೊಳ್ಳಬಹುದು. ನೀವು ಯಾರನ್ನು ಬಿಟ್ಟರೂ ಅವನನ್ನು ಮಾತ್ರ ಬಿಟ್ಟು ಹೋಗಬಾರದೆಂದು ನನ್ನ ವಿನಂತಿಯುಂಟು.''

"ನಾನು ಯಾರನ್ನೂ ಬಿಟ್ಟುಹೋಗುವದಿಲ್ಲ. ಯಾವನೊಬ್ಬನನ್ನು ಬಿಟ್ಟು ಹೋದರೆ ಅಪರಾಧಿಯೆಂದು ನಿರ್ಣಯಿಸಲ್ಪಟ್ಟು ಶಾಸನಕ್ಕೆ ಗುರಿಯಾದೇನು?'' ಎಂದು ಸುಭೇದಾರನು ನುಡಿದು ವಿಸ್ಮಯದಿಂದ:—

"ಸೇನಾಪತಿಗಳೇ, ಅವರ ಮೇಲೆ ಇಷ್ಟೇಕೆ ನಿಮ್ಮ ಕಟಾಕ್ಷವು?''

"ರಾಮದೇವನನ್ನು ಒಯ್ಯುವದರಿಂದ ನನಗೆ ಅಲಭ್ಯಲಾಭವಾಗುವಂತಿರುವದು. ಅವನು ನನ್ನ ಸ್ನೇಹಿತನಿರುವದು ನಿಜವು; ಅವನು ನನ್ನಲ್ಲಿ ವಿಶ್ವಾಸದಿಂದಿರುವನು; ನಾನು ಮಾತ್ರ ಕಾರ್ಯಸಾಧನೆಯ ಪೂರ್ತಿ ಅವನೊಡನೆ ಗೆಳೆತನ ಬಳೆಯಿಸಿರುವೆನು. ನಾಣ್ಯಕರಗಿಸುವ ಕಾರ್ಯದಲ್ಲಿ ಅವನನ್ನು ತೊಡಗಿಸಿದ ಶ್ರೇಯವು ನನಗೇ ಇರುವದು! ಅವನು ಗಂಡಾಂತರಕ್ಕೀಡಾಗಬೇಕೆಂದೇ ಹೀಗೆ ಮಾಡಿದೆನು. ಸುಭೇದಾರರೆ, ಇಷ್ಟೆಲ್ಲ ಕಾರಸ್ಥಾನಗಳನ್ನು ರಚಿಸಿದ್ದು ನನ್ನ ಸ್ವಾರ್ಥಕ್ಕಾಗಿ! ರಾಮದೇವನ ಪತ್ನಿಯು ದಿವ್ಯ ಲಾವಣ್ಯವತಿಯಾಗಿರುವದರಿಂದ ಅವಳ ಸಾಧನೆಗಾಗಿ ಹೀಗೆ ಸಾಹಸ ನಡೆಸಿದೆನು. ನೀವು ರಾಮದೇವನನ್ನು ಒಯ್ದರೆ ನನ್ನ ಕಾರ್ಯವಾಯಿತು!"

ವಿಕ್ರಮದೇವನು ಹೀಗೆ ನುಡಿದೊಡನೆಯೇ ಬಹಾದ್ದೂರಶಹನ ತಲೆಯು ತಿರುಗಿತು. ಆಗಿನ ಕಾಲದ ಮುಸಲ್ಮಾನರಲ್ಲಿ ಇವನು ಉತ್ತಮ ವರ್ಗಕ್ಕೆ ಸೇರಿದವನೆಂದು ಹೇಳಲಿಕ್ಕೆ ಪ್ರತ್ಯವಾಯವಿಲ್ಲ. ಆದ್ದರಿಂದ ವಿಕ್ರಮದೇವನ ನಿರ್ಲಜ್ಜತನದ ಮಾತುಗಳಿಗೆ ಅವನು ತಿರಸ್ಕಾರಗೊಂಡನು; ಹಾಗು ಅತ್ಯಂತ ಸಂತಾಪಯುಕ್ತನಾದನು. ಅವನು ಕ್ರೋಧಯುಕ್ತಧ್ವನಿಯಿಂದ:—

"ವಿಕ್ರಮದೇವಾ! ನಿನ್ನ ನೀಚತನಕ್ಕೆ ಬೆಲೆಯಿಲ್ಲದಾಯಿತು. ನಿನ್ನಂತಹ ನೀಚ ಮನೋವೃತ್ತಿಯ ಜನರು ಈ ಭರತಖಂಡದಲ್ಲಿ ಬಹಳವಾದುದರಿಂದಲೆ ಅದು ಪಾರತಂತ್ರ್ಯದಲ್ಲಿ ಸಿಲುಕಿತು. ರಾಜ್ಯಕ್ಕೆ ರಾಜ್ಯವನ್ನು ಬುಡಮೇಲು ಮಾಡಿ ಯಾವದೊಂದು ಪ್ರಾಂತದ ಒಡೆತನವನ್ನು ಸಂಪಾದಿಸುವದಕ್ಕೆ ಹವಣಿಸ ತೊಡಗಿರುವ ದೇಶದ್ರೋಹಿಯೂ, ರಾಜದ್ರೋಹಿಯೂ ಆದ ನಿನ್ನ ಸ್ವಾರ್ಥಿಯಾದ ಮನಸ್ಸಿಗೆ ಧಿಕ್ಕಾರ! ವಿಕ್ರಮಾ! ನಿನ್ನ ನೀಚತನವು ಇಷ್ಟಕ್ಕೇ ಮುಗಿಯಿತೆಂದು ತಿಳಿದಿದ್ದೆನು; ಓರ್ವ ಸಾಧ್ವಿಯ ವಶಕ್ಕಾಗಿ ನಡೆಯಿಸಿರುವ ನಿನ್ನ ಸಾಹಸವನ್ನು ನೋಡಿ ನನ್ನ ಆ ತಿಳುವಳಿಕೆಯು ಬೇರೆಯಾಯಿತು ಕುಲಾಂಗಾರಾ! ಹಿಂದುವೆನಿಸಿಕೊಳ್ಳುವ ನೀನು ಹಿಂದುಗಳ ಹಿತಾಹಿತಗಳ ಕಡೆಗೆ ಲಕ್ಷ್ಯಗೊಡದೆ, ಸ್ವಜನದ್ರೋಹವನ್ನು ಚಿಂತಿಸತೊಡಗಿದ ಮೇಲೆ ಅನ್ಯರಿಗೇಕೆ ಹೆಸರಿಡಬೇಕು? ವಿಶ್ವಾಸ ಘಾತಕಿಯೇ! ನೀನು ರಾಮದೇವನ ಮಿತ್ರನಲ್ಲವೇ? ಭಲೆ! ನಿನ್ನ ಸ್ನೇಹಭಾವನೆಯು ವಿಲಕ್ಷಣವಾದದ್ದಿರುವದು! ಮಿತ್ರನನ್ನು ಗಂಡಾಂತರದಲ್ಲಿ ಕೆಡಹಿ ಅವನ ಸ್ತ್ರೀಯನ್ನು ವಶಮಾಡಿಕೊಳ್ಳಬೇಕೆಂಬ ಸಾಹಸ ನಡೆಸಿರುವೆಯಲ್ಲವೇ! ಸ್ವಾಮಿದ್ರೋಹ, ರಾಷ್ಟ್ರದ್ರೋಹ, ಮಿತ್ರದ್ರೋಹ, ಸ್ವಜನದ್ರೋಹ, ಧರ್ಮದ್ರೋಹ ಮೊದಲಾದ ಪಂಚಮಹಾಪಾತಕಗಳನ್ನು ಮಾಡುವದಕ್ಕಾಗಿ ಸಿದ್ಧನಾದೆಯಾ! ಥೂ! ನಿನ್ನ ಬಾಳ್ವೆಗೆ ಬೆಂಕೀ ಹಚ್ಚಲಿ!!"

## ನಾಥಾ! ಇದೇ ಕೊನೆಯ ದರುಶನವೆ?

ಯವನ ಸೈನಿಕರು ದೀನ ದೀನ! ಎನ್ನುತ್ತ ಮನೆಯನ್ನು ಪ್ರವೇಶಿಸಿದ ಕೂಡಲೆ ವಿಮಲಾದೇವಿಯು ಹೌಹಾರಿದಳು. ಭಯದಿಂದ ಅವಳ ಸರ್ವಾಂಗವು ಕಂಪಿಸ ತೊಡಗಿತು. ಕ್ರೂರ ಮುಖಮುದ್ರೆಯ ಯವನ ಸೈನಿಕರನ್ನು ನೋಡಿ ಅವಳ ಕಣ್ಣುಗಳಲ್ಲಿ ಕತ್ತಲೆ ಕವಿಯಿತು. ಅಂಜಿಕೆಯಿಂದ ಅವಳು ಗಟ್ಟಿಯಾಗಿ ಚೀರಿ ಪತಿಯನ್ನು ಬಿಗಿದಪ್ಪಿದಳು. ರಾಮದೇವನು ಬೆದರಿದ ತನ್ನ ಪ್ರಿಯತಮೆಗೆ ಧೈರ್ಯಗೊಳ್ಳುವದಕ್ಕಾಗಿ ಹೇಳತೊಡಗಿದನು. ಯವನ ಸೈನಿಕರು ರಾಮದೇವನನ್ನು ನೋಡಿ: "ರಾಮದೇವ ಅಂದರ ಹ್ಯ" ಎಂದು ಪಥಕದ ನಾಯಕನಿಗೆ ತಿಳಿಸಿದರು. ಆ ನಾಯಕನು ರಾಮದೇವನ ಮನೆಯನ್ನು ಭದ್ರವಾಗಿ ಕಾಯಬೇಕೆಂದು ತಿಳಿಸಲು ಸೈನಿಕರೆಲ್ಲರು ಮನೆಯಿಂದ ಹೊರಬಿದ್ದು ಸುತ್ತಲು ಮುತ್ತಿಕೊಂಡು ಕುಳಿತರು.

ಧೂರ್ತನಾದ ರಾಮದೇವನು ಈಗಾಗಲೆ ತನ್ನ ಭವಿಷ್ಯವನ್ನು ನಿರ್ಧರಿಸಿಕೊಂಡಿದ್ದನು. ಬಾದಶಹನು ತನ್ನ ಮನೆಯನ್ನು ಸುಲಿದುಕೊಂಡು ಹೋಗುವನೆಂಬ ನಂಬಿಗೆಯು ಅವನಿಗಾಯಿತು. ಪ್ರಸಂಗವಶಾತ್ ನಾಣ್ಯಕರಗಿಸುವ ಜನರನ್ನು ಸೆರೆಹಿಡಿದುಕೊಂಡು ಹೋಗಬಹುದೆಂದು ಅವನು ತರ್ಕಿಸಿದನು. ವಿನಾಯಕದೇವನು ಸ್ವಾಭಿಮಾನಶೂನ್ಯನಾಗಿ ಈ ಕಟ್ಟಳೆಗೆ ಒಡಂಬಟ್ಟದ್ದು ಅನುಚಿತವಾಯಿತೆಂದು ಅವನು ರಾಜಕುಮಾರನ ಮೇಲೆ ಸಿಟ್ಟಾದನು. ಸಿಟ್ಟಾಗಿ ಮಾಡುವದೇನು? ಪ್ರಾರಬ್ಧಪ್ರಹಾರವನ್ನು ಸಹಿಸದಿದ್ದರೆ ಗತ್ಯಂತರವೇನು?

"ಪ್ರಿಯೆ, ನಾನು ವಿನಾಯಕದೇವನನ್ನು ನಂಬಿ ಕೆಟ್ಟೆನು! ನಿನ್ನ ಮಾತು ಕೇಳಿದ್ದರೆ ಈ ದುರವಸ್ಥೆಯು ಪ್ರಾಪ್ತವಾಗುತ್ತಿರಲಿಲ್ಲ. ಎಂತಹ ಪ್ರಸಂಗದಲ್ಲಾದರೂ ರಾಜನಿಷ್ಠ ಜನರನ್ನು ಕಾಯುವೆನೆಂದು ಅವನು ಅಭಿವಚನವಿತ್ತದ್ದರಿಂದ ನಾನು ಮುಂದಾಳುವಾದೆನು. ಈ ಒಪ್ಪಂದಕ್ಕೆ ವಿಕ್ರಮದೇವನಾದರೂ ವಿರೋಧವನ್ನುಂಟುಮಾಡಬೇಕಾಗಿತ್ತು. ನನ್ನ ಪ್ರಾರಬ್ಧಯೋಗಕ್ಕೆ ಯಾರು ಮಾಡುವದೇನು?" ಎಂದು ನುಡಿದು ರಾಮದೇವನು ಉಸುಗರೆದನು.

"ನೀವು ಈ ಕಾರ್ಯದಲ್ಲಿ ತೊಡಗಬಾರದೆಂದು ಮೊದಲೇ ಹೇಳಲಿಲ್ಲವೆ? ವಿಕ್ರಮದೇವನು ಸ್ನೇಹಿತನೆಂದು ಒಗೆದು ಅವನ ಮಾತಿನ ಮೇರೆಗೆ ನಡೆದುದಕ್ಕೆ ಈ ರೀತಿಯಾಗಿ ಪ್ರತಿಫಲವು ದೊರೆಯಿತು. ರಾಜಕುಮಾರನ ಮೇಲೆ ನಿಷ್ಠೆಯಿಂದ ನಡೆದು ಬಾಮನೀ ಬಾದಶಹನ ವೈರಬೆಳೆಯಿಸಿದ್ದಕ್ಕೆ ಈಗಿನ ಗಂಡಾಂತರವು ಪ್ರಾಪ್ತವಾಯಿತು. ರಾಜರಾದ ತಾವು ಕಪ್ಪಕಾಣಿಕೆಗಳನ್ನು ಕೊಟ್ಟು ಪಾರಾಗಿ

ನಿಮ್ಮಂತಹ ನಿರಾಧಾರಿ ಪ್ರಜೆಗಳನ್ನು ಸಂಕಟಕ್ಕೀಡುಮಾಡುವ ಇಂತಹ ರಾಜರನ್ನು ನಂಬಬಹುದೇ? ಪ್ರಿಯಕರಾ, ನೀವು ಈ ಗಂಡಾಂತರದೊಳಗಿಂದ ದಾಟುವದಕ್ಕೆ ಉಪಾಯವೇನು?''

''ನಾನಂತೂ ಪಂಗಾಣವಾಗಿರುವೆನು. ಬಹಳ ಮಾಡಿ ಈ ಕಂಟಕದಿಂದ ಪಾರಾಗುವೆನೆಂಬ ವಿಶ್ವಾಸವು ನನಗಿರುವದಿಲ್ಲ. ನಾಣ್ಯ ಕರಗಿಸುವ ನಮ್ಮಂತಹ ಜನರನ್ನು ಸೆರೆಹಿಡಿದುಕೊಂಡು ಹೋಗಿ ಮಹಮ್ಮದಶಹನ ವಶಕ್ಕೆ ಕೊಟ್ಟು, ಸ್ವಾಮಿನಿಷ್ಠೆಯ ಪರಾಕಾಷ್ಠೆಯನ್ನು ತೋರಿಸಬೇಕೆನ್ನುವ ಬಹಾದ್ದೂರಶಹನು ನನ್ನನ್ನು ಬಿಟ್ಟು ಹೋಗುವನೆಂದು ಹೇಗೆ ಹೇಳಬೇಕು?''

ಪತಿಯ ಮಾತುಗಳನ್ನು ಕೇಳಿದೊಡನೆಯೇ ವಿಮಲಾದೇವಿಗೆ ಆಕಾಶದಿಂದ ಕೊಡ್ಲಿಯು ಬಿದ್ದಂತಾಯಿತು. ಅವಳ ಕಣ್ಣುಗಳಿಂದ ದುಃಖಾಶ್ರುಗಳು ಧಾರೆಗಟ್ಟಿ ಹರಿಯತೊಡಗಿದವು. ಪತಿಯು ಅದೂರದರ್ಶಿತನದಿಂದ ವೃಥಾಸಂಕಟವನ್ನು ತಂದುಕೊಂಡನೆಂದು ಅವಳು ದುಃಖಿಸತೊಡಗಿದಳು. ರಾಮದೇವನು ಅವಳನ್ನು ಸಂತೈಸುವ ಮಾತಿನಿಂದ:—

''ಪ್ರಿಯೆ, ಇನ್ನು ದುಃಖಿಸಿ ಫಲವೇನು? ಮಹಮ್ಮದಶಹನೇನು ನನ್ನನ್ನು ತೋಫಿನಬಾಯಿಗೆ ಕೊಡಲಿಕ್ಕಿಲ್ಲ. ಕೆಲವುದಿನ ಕಾರಾಗೃಹವನ್ನನುಭವಿಸುವಪ್ರಸಂಗ ಒದಗಬಹುದು. ಈಶ್ವರಾನುಗ್ರಹದಿಂದ ಮನೆಯಲ್ಲಿ ಸಂಪತ್ತಿಗೇನು ಕೊರತೆಯಿಲ್ಲ. ನಾನು ಬರುವವರೆಗೆ ಹೇಗಾದರೂ ಮಾಡಿ ದುಃಖವನ್ನು ತಡೆದುಕೋ.''

''ಕ್ರೂರನಾದ ಮಹಮ್ಮದಶಹನು ನಿಮ್ಮನ್ನು ತೋಫಿನ ಬಾಯಿಗೆ ಕೊಡಲಿಕ್ಕಿಲ್ಲನೆಂಬದರ ವಿಶ್ವಾಸವೇನು? ಬಹಾದ್ದೂರಶಹನು ಬಹಾದ್ದೂರಿಕೆಯನ್ನು ತೋರಿಸುವದಕ್ಕಾಗಿ ನಮ್ಮ ಮನೆಯ ಸಂಪತ್ತನ್ನು ಒಳಿದೊಯ್ಯಲಿಕ್ಕಿಲ್ಲವೆಂದು ಯಾರು ಹೇಳಬೇಕು? ನಾಥಾ! ನೀವಿಲ್ಲದ ಮೇಲೆ ಈ ಐಶ್ವರ್ಯವನ್ನು ತೆಗೆದುಕೊಂಡು ನಾನು ಏನು ಮಾಡಲಿ? ಪ್ರಾಗಲ್ಭ ಪ್ರಹಾರದಿಂದ ನಿಮಗೆ ದೇಹಾಂತ ಶಾಸನವು ವಿಧಿಸಲ್ಪಟ್ಟರೆ, ನಿರಾಧಾರಿಯಾದ ನಾನು ಈ ಜಗತ್ತಿನಲ್ಲಿ ಒದುಕಿ ಬಾಳಬೇಕೆನ್ನುವಿರಾ?'' ಎಂದು ನುಡಿದು ವಿಮಲಾದೇವಿಯು ಕಲ್ಮರಗಳು ಕರಗುವಂತೆ ದುಃಖಿಸತೊಡಗಿದಳು. ಅವಳಿಗೆ ಇನ್ನೊಂದು ದುಃಖವು ಬಲವಾಗಿ ಬಾಧಿಸತೊಡಗಿತ್ತು. ಮುಸಲ್ಮಾನರ ಆಳಿಕೆಯ ಕಾಲವೆಂದರೆ, ಬಳ್ಳೆಯ ಕಠಿಣ ತರದ್ದಾಗಿತ್ತು. ಆಗ ಬರೇ ಸಂಪತ್ತಿನ ಸುಲಿಗೆಯಷ್ಟಲ್ಲದೆ, ಹಿಂದು ಸ್ತ್ರೀ-ಪುರುಷರ ಶೀಲಧರ್ಮಗಳು ಸಹ ನಾಶವಾಗುವ ಸಂಭವವು ವಿಶೇಷವಾಗಿದ್ದುದರಿಂದ ಬಹಾದ್ದೂರಶಹನ ಕಟಾಕ್ಷಕ್ಕೆ ತನ್ನ ಶೀಲವೆಲ್ಲ ಆಹುತಿಯಾಗುವ ಪ್ರಸಂಗ ಒದಗುವದೋ ಎಂದು ಅವಳು ಪ್ರಲಾಪಿಸ ತೊಡಗಿದಳು.

ಬಹಾದ್ದೂರಶಹನು ನಾಣ್ಯಕರಗಿಸುವ ಜನರನ್ನಷ್ಟೆ ಸೆರೆ ಹಿಡಿದಿದ್ದನು. ರಾಮದೇವನನ್ನಾದರೂ ಸ್ವಾಧೀನಪಡಿಸಿಕೊಳ್ಳುವದಕ್ಕಾಗಿ ಅವನ ಮನೆಗೆ ಬಂದನು. ಶಹನು ಬಂದದ್ದು ನೋಡಿದೊಡನೆಯೇ ವಿಮಲಾದೇವಿಯ ಪ್ರಾಣವು ನೆತ್ತಿಯಿಂದ ಹೋದಂತಾಯಿತು. ಅವಳು ಖಾನನನ್ನು ಕುರಿತು ದೈನ್ಯವಾಣಿಯಿಂದ:—

"ಖಾನಸಾಹೇಬರೆ, ಪತಿದಾನಕೊಡಿರಿ" ಎಂದು ರೋದಿಸುತ್ತ ನುಡಿಯತೊಡಗಿದಳು.

ಆಗ ಖಾನನು ನಿಶ್ಚಯಾತ್ಮಕ ಸ್ವರದಿಂದ:—

"ಅವ್ವನವರೆ, ಬಾದಶಹರ ಆಜ್ಞೆಯ ಮೇರೆಗೆ ನಡೆಯದಿದ್ದರೆ ಗತ್ಯಂತರವಿಲ್ಲ. ನಿಮ್ಮ ಜನರೇ ನಿಮಗೆ ಮುಳುವಾದರು. ನಿಮ್ಮ ವಿಕ್ರಮದೇವ ಸೇನಾಪತಿಗಳು ಬಾದಶಹರಿಗೆ ಏನೇನೋ ಸೂಚಿಸಿರುವರಂತೆ. ನಾಣ್ಯಕರಗಿಸುವ ಜನರನ್ನು ಹಿಡಿದು ಕೊಲೆಮಾಡಿದ ಹೊರತು ಆ ಕಾರ್ಯವು ನಿಲ್ಲುವದಿಲ್ಲವೆಂದು ಹೇಳಿಕಳಿಸಿದ ಮೂಲಕ ಆ ಜನರನ್ನೆಲ್ಲ ಹಿಡಿದು ತರುವದಕ್ಕಾಗಿ ಅವರು ನನಗೆ ಕಟ್ಟಪ್ಪಣೆ ಮಾಡಿರುವರು. ವಿಕ್ರಮದೇವನು ನೀಚವೃತ್ತಿಯವನಿರುವನು. ಅವನು ತನ್ನ ಅಲ್ಪಲಾಭಕ್ಕಾಗಿ ದೇಶವಿಘಾತಕ ಕೃತಿಯನ್ನು ಮಾಡತೊಡಗಿರುವನು. ನೀವು ಆ ವಿಕ್ರಮನನ್ನು ನಂಬಬೇಡಿರಿ. ಅವನು ನಿಮ್ಮ ಶೀಲವನ್ನು ಸೂರೆಮಾಡಲು ಸಿದ್ಧನಿರುವನು. ನಿಮ್ಮ ಪ್ರಾಪ್ತಿಗಾಗಿಯೆ ನಿಮ್ಮ ಪತಿಗಳನ್ನು ಅವನು ಗಂಡಾಂತರದಲ್ಲಿ ಕೆಡಹಿರುವನು. ನಾನು ಹೇಳಿದ ಎಲ್ಲ ಸಂಗತಿಗಳನ್ನು ಅತ್ಯಂತ ಗುಪ್ತವಾಗಿಡಿರಿ. ನಿಮ್ಮ ಮೇಲಿನ ಸಹಜಪ್ರೇಮದಿಂದ ಎಲ್ಲ ಸಂಗತಿಗಳನ್ನು ಭಗಿನೀ ಸಮಾನರಾದ ನಿಮಗೆ ತಿಳಿಸಿರುವೆನಲ್ಲದೆ, ಯಾವದೊಂದು ದುಷ್ಟ ವಿಚಾರದಿಂದಲ್ಲವೆಂಬದನ್ನು ನೀವು ನಂಬಿರಿ."

"ಏನು ಇದೆಲ್ಲ ವಿಕ್ರಮನ ಕಾರಸ್ಥಾನವೇ?" ಎಂದು ಸಖೇದಾಶ್ಚರ್ಯದಿಂದ ರಾಮದೇವನು ಕೇಳಿದನು.

"ಹೌದು! ಇದೆಲ್ಲ ವಿಕ್ರಮನ ನೀಚವೃತ್ತಿಯ ಫಲವು!"

ಖಾನನು ಹೀಗೆ ಹೇಳಿದ ಕೂಡಲೆ ವಿಮಲಾದೇವಿಯೂ, ರಾಮದೇವನೂ ವಿಕ್ರಮನ ಮೇಲೆ ಬೆಂಕಿಯನ್ನು ಕಾರತೊಡಗಿದರು. ಅಲ್ಲಿ ಅವನಿದ್ದರೆ ರಾಮದೇವನ ಕ್ರೋಧಾಗ್ನಿಗೆ ಆಹುತಿಯಾಗುತ್ತಿದ್ದನೆಂಬದಕ್ಕೆ ಸಂದೇಹವಿದ್ದಿಲ್ಲ.

"ಖಾನಸಾಹೇಬರೇ, ನೀವು ನನ್ನ ಮನೆಯ ಎಲ್ಲ ಸಂಪತ್ತನ್ನು ತೆಗೆದುಕೊಂಡು ಹೋಗಿರಿ. ಅದಕ್ಕೆ ನಾನು ಬೇಡೆನ್ನುವದಿಲ್ಲ; ಆದರೆ ನನ್ನ ಪತಿಯನ್ನು ಸೆರೆ ಹಿಡಿಯಬೇಡಿರಿ."

"ಹಾಗೆ ಮಾಡುವದಕ್ಕೆ ನನಗೆ ಮಾರ್ಗವಿಲ್ಲ. ಅಪ್ಪನವರೇ, ನಿಮ್ಮ ಮನೆಯನ್ನು ಸುಲಿದುಕೊಂಡು ಹೋಗುವದಲ್ಲದೆ, ನಿಮ್ಮ ಪತಿಗಳನ್ನೂ ಒಯ್ಯ ಬೇಕಾಗಿರುವದು. ಹಾಗೆ ನಾನು ಮಾಡದಿದ್ದರೆ ರಾಜದ್ರೋಹಿಯೆಂದು ನಿಶ್ಚಯಿ ಸಲ್ಪಟ್ಟು ಬಾದಶಹರು ನನಗೆ ಪ್ರಾಣದಂಡನೆಯನ್ನು ವಿಧಿಸಬಹುದು. ನೀವು ಇನ್ನು ಇಲ್ಲಿದ್ದರೆ ವಿಕ್ರಮನ ಪಾತಕೀದೃಷ್ಟಿಗೆ ಬಲಿಯಾಗಬಹುದಾದ್ದರಿಂದ ಸುರಕ್ಷಿತವಾದ ಸ್ಥಳಕ್ಕೆ ಹೋಗಿರಿ!"

ಖಾನನ ಮಾತುಗಳನ್ನು ಕೇಳಿದ ಕೂಡಲೆ ರಾಮದೇವನು ದುಃಖಸಂತಾಪ ಗಳಿಂದ ಉರಿಯತೊಡಗಿದನು. ವಿಮಲಾದೇವಿಯಂತೂ ದಿಙ್ಮೂಢಳಾಗಿ ರೋದಿ ಸತೊಡಗಿದಳು. ಆಗ ರಾಮದೇವನು:—

"ಖಾನರೇ, ಪರಧರ್ಮೀಯರಾದ ನೀವು ಇಷ್ಟು ಸದಯಾಂತಃಕರಣಿಗಳಾ ಗಿರುವಿರಿ; ಸ್ವಕೀಯರಾದವರು ಹೇಗೆ ಕರಳಲ್ಲಿ ಕತ್ತರಿಯನ್ನಾಡಿಸಿ, ಸ್ವಾರ್ಥ ಸಾಧನೆ ಮಾಡಿಕೊಳ್ಳುತ್ತಿರುವರು ನೋಡಿದಿರಾ?"

"ಅದಕ್ಕೆ ಉಪಾಯವಿಲ್ಲ!" ಎಂದು ಖಾನನು ನುಡಿದು:—

"ಇನ್ನು ಬೇಗನೆ ಇಲ್ಲಿಂದ ಹೊರಡಿರಿ" ಎಂದು ರಾಮದೇವನಿಗೆ ಹೇಳಿದನು.

'ಖಾನಸಾಹೇಬರೇ, ನನ್ನ ಪತಿರಾಜರ ಜೀವಕ್ಕೆ ಅಪಾಯವಾಗದಂತೆ ನೋಡಬೇಕೆಂದು ನಿಮ್ಮನ್ನು ಪ್ರಾರ್ಥಿಸುವೆನು."

"ಅಪ್ಪನವರೇ, ನಾನು ಕೈಲಾದಷ್ಟು ಯತ್ನಿಸುವೆನು. ಅಲ್ಲಾನ ಸಾಕ್ಷಿ ಯಾಗಿಯೂ ಈ ಕಾರ್ಯದಲ್ಲಿ ನಾನು ಮಾನಸಿಕತನ ಮಾಡುವದಿಲ್ಲ. ಮಹ ಮ್ಮದಶಹನ ಹೃದಯವು ಕಲ್ಲಿಗಿಂತಲೂ ಕಲ್ಲಾಗಿರುವದರಿಂದ, ನಾನು ವಚನ ವನ್ನು ಮಾತ್ರ ಕೊಡಲಾರೆನು" ಎಂದು ಬಹಾದ್ದೂರಶಹನು ನುಡಿದು, ರಾಮ ದೇವನ ಮನೆಯ ಎಲ್ಲ ಸಂಪತ್ತನ್ನು ಸುಲಿದುಕೊಂಡನು. ವಿಮಲಾದೇವಿಯು ಇನ್ನು ನಿರಾಧಾರಿಯಾದಳೆಂದು ರಾಮದೇವನಿಗೆ ಪರಮ ದುಃಖವಾಯಿತು. ಆಗ ಅವನು ಪತ್ನಿಯನ್ನು ಕುರಿತು ಗದ್ಗದಸ್ವರದಿಂದ:—

"ಪ್ರಿಯೇ, ನಾನು ತಿರುಗಿ ಬರುವ ವಿಶ್ವಾಸವಿಲ್ಲ. ಹೇರಳವಾದ ಸಂಪ ತ್ತಿನ ಮೇಲೆ ನೀನು ಉಪಜೀವಿಸಬಹುದೆಂದು ನಂಬಿದ್ದೆನು; ದುರ್ದೈವವು ಅದನ್ನು ಇರಗೊಡಲಿಲ್ಲ. ನಿನ್ನ ಮಾರ್ಗವನ್ನು ನೀನು ಕಂಡುಕೋ. ಈ ಹತಭಾಗಿಯಿಂದ ನಿನಗೆ ಯಾವ ವಿಧದ ಸೌಖ್ಯವೂ ದೊರೆಯಲಿಲ್ಲ. ಜೀವದಿಂದು ಳಿದರೆ ಮತ್ತೆ ಭೆಟ್ಟಿಯು; ಇಲ್ಲದಿದ್ದರೆ ಇದೇ ಕಡೆಯು............"

ರಾಮದೇವನ ಮುಖದಿಂದ ಮಾತುಗಳು ಹೊರಡದಾದವು. ಅವನ

ಕಣ್ಣುಗಳಿಂದ ನೀರು ಸುರಿಯುತೊಡಗಿದವು. ಆಗ ವಿಮಲಾದೇವಿಯು ಪ್ರಲಾಪಿಸುತ್ತ:—

"ನಾಥಾ! ಇದೇ ಕಡೆಯ ದರುಶನವೇ!" ಎಂದು ನುಡಿದು ಚಂಡ ಮಾರುತನಿಂದ ಕದಳೀವೃಕ್ಷವು ಇಳೆಗುರುಳುವಂತೆ ಭೂಮಿಗೆ ಬಿದ್ದು ನಿಶ್ಚೇಷ್ಟಿತಳಾದಳು!

---

## ಹಿಂದುಸ್ಥಾನವು ಹಿಂದುಗಳ ಸೌಖ್ಯಕ್ಕಾಗಿ!

ಕೈಲಾಸದ ಸಂಗ್ರಾಮದಲ್ಲಿ ತನ್ನ ಪಕ್ಷಕ್ಕೇ ಜಯವುಂಟಾಗಿ ವಿನಾಯಕದೇವನಿಂದ ಹೇರಳವಾದ ಕಪ್ಪ-ಕಾಣಿಕೆ ದೊರೆತದ್ದರಿಂದಲೂ, ನಾಣ್ಯ ಕರಗಿಸುವ ಮುಖಂಡ ಜನರ ಸಂಪತ್ತು ಸ್ವಾಧೀನವಾದದ್ದರಿಂದಲೂ ಮಹಮ್ಮದಶಹಾ ಬಾಮನಿಯು ಮದೋನ್ಮತ್ತನಾಗಿದ್ದನು. ಅವನು ಅತ್ಯಂತ ನೀಚತನದಿಂದ ಬಾಮನೀ ನಾಣ್ಯಗಳನ್ನು ಕರಗಿಸಿದ ರಾಮದೇವಾದಿ ಮುಖಂಡರಿಗೆ ದೇಹಾಂತ ಶಾಸನವನ್ನು ವಿಧಿಸಿ, ತನ್ನ ಆಸುರೀ ಮನೋವೃತ್ತಿಯನ್ನು ಶಾಂತಪಡಿಸಿಕೊಂಡಿದ್ದನು! ದಕ್ಷಿಣದಲ್ಲಿ ಸ್ವತಂತ್ರ ಹಿಂದು ರಾಜ್ಯಗಳಿರುವದು ಅವನ ಮನಸ್ಸಿಗೆ ತಿರಸ್ಕಾರವೆನಿಸಿತ್ತು. ಪ್ರಬಲವಾದ ತೆಲಂಗಣ ಕರ್ನಾಟಕ ರಾಜ್ಯಗಳು ಅವನ ಕಣ್ಣುಗಳಲ್ಲಿ ಒತ್ತತೊಡಗಿದ್ದವು. ಯಾವದೊಂದು ನಿಮಿತ್ಯದಿಂದ ಆ ಎರಡೂ ರಾಜ್ಯಗಳನ್ನು ವಶಪಡಿಸಿಕೊಳ್ಳಬೇಕೆಂದು ಅವನು ಮಹತ್ವಾಕಾಂಕ್ಷೆಯುಳ್ಳವನಾದ್ದನು. ಬಲಾಢ್ಯನಾದ ವಿಜಯನಗರ ಸಮ್ರಾಟ ಬುಕ್ಕರಾಯನನ್ನು ಕೆಣಕುವ ಧೈರ್ಯವು ಅವನಿಗಿನ್ನೂ ಬಂದಿರಲಿಲ್ಲ. ತೆಲಂಗಣದ ರಾಜಕುಮಾರನು ವಿಲಾಸಿಯಿದ್ದುದರಿಂದ, ರಾಜಕಾರಣದ ಕಡೆಗೆ ಸ್ವಲ್ಪ ದುರ್ಲಕ್ಷಿಸಿದ ಸಂಧಿಯನ್ನು ಸಾಧಿಸಿ, ಅವನನ್ನು ಹಣ್ಣು ಮಾಡಬೇಕೆಂದು ಮಹಮ್ಮದಶಹನು ಹೊಂಚು ಹಾಕಿ ಕುಳಿತಿದ್ದನು. ಸ್ವಾರ್ಥಿಯಾದ ವಿಕ್ರಮದೇವನು ಜಹಾಗೀರಿಯ ದುರಾಶೆಯಿಂದ ದೇಶಹಿತವಿಘಾತಕ ಕಾರ್ಯವನ್ನು ಕೈಕೊಂಡದ್ದರಿಂದ ಮಹಮ್ಮದಶಹನ ಮನೋಭೀಷ್ಟವು ಈಡೇರುವ ಪ್ರಸಂಗ ಬಂದಿತ್ತು. ಮಾತೃದ್ರೋಹಿಗಳಾದ ಜನರ ಆತ್ಮವಂಚಕತನದಿಂದಲೇ ಮಾತೃಭೂಮಿಗೆ ಪಾರತಂತ್ರ್ಯಶೃಂಖಲೆಯು ತೊಡಿಸಲ್ಪಟ್ಟಿತು. ಹಾಗಿಲ್ಲವಿದ್ದರೆ ಇಂತಹ ಅವಾಢವ್ಯ ದೇಶವು ಯವನರ ಹಸ್ತಗತವಾಗುವ ಬಗೆ ಹೇಗೆ?

ತೆಲಂಗಣವನ್ನು ಸ್ವಾಧೀನಪಡಿಸಿಕೊಳ್ಳುವದಕ್ಕೆ ಹಾತೊರೆಯತೊಡಗಿದ್ದ ಮಹಮ್ಮದಶಹನಿಗೆ ಯಾವದೊಂದು ನಿಮಿತ್ಯವು ಬೇಕಾಗಿತ್ತು. ಯಾವದೊಂದು

ನೆವದಿಂದ ವಿನಾಯಕದೇವನ ಮೇಲೆ ದಂಡೆತ್ತಿ ಹೋಗಬೇಕೆಂದು ಅವನು ಹೊಂಚು ಹಾಕಿದ್ದನು. ಕೆಲವು ಕಾರವಾನರು ಉತ್ತಮೋತ್ತಮ ಕುದುರೆಗಳನ್ನು ಮುಹಮ್ಮದಶಹನ ಒಳಿಗೆ ತೆಗೆದುಕೊಂಡು ಹೊರಟಾಗ ದಾರಿಯಲ್ಲಿ ವೇಲಂ ಪಟ್ಟಣದ ರಾಜಕುಮಾರನಾದ ವಿನಾಯಕದೇವನು ಅವುಗಳೊಳಗಿನ ಕೆಲವು ಚಲೋ ಕುದುರೆಗಳನ್ನು ಬೆಲೆ ಕೊಟ್ಟು ಆಗ್ರಹದಿಂದ ತೆಗೆದುಕೊಂಡನು. ಕಾರವಾನರು ಮುಹಮ್ಮದಶಹನ ಕಡೆಗೇ ಮಾರಿ ಹೆಚ್ಚು ಬೆಲೆ ಸಂಪಾದಿಸಬೇಕೆಂಬ ಮನಸ್ಸುಳ್ಳವರಿದ್ದುದರಿಂದ, ವಿನಾಯಕದೇವನು ಕುದುರೆಗಳನ್ನು ಒತ್ತಾಯದಿಂದ ಕೊಂಡ ಸಂಗತಿಯನ್ನು ಅವನಿಗೆ ತಿಳಿಸಿದರು. ತನ್ನ ಒಳಿಗೆ ಬರತಕ್ಕ ಕುದುರೆಗಳನ್ನು ಯಃಕಶ್ಚಿತನಾದ ವಿನಾಯಕದೇವನು ತೆಗೆದುಕೊಂಡು ತನ್ನ ಅಪಮಾನ ಮಾಡಿದನೆಂದು ಅವನು ರಾಜಕುಮಾರನ ಮೇಲೆ ಕ್ರೋಧಗೊಂಡನು. ಹಿಂದೆಯೊಮ್ಮೆ ಅಪಜಯವನ್ನು ಹೊಂದಿ ಪ್ರಾಯಶ್ಚಿತ್ತವನ್ನು ಅನುಭವಿಸಿದ್ದರೂ ಮತ್ತೆ ತನ್ನನ್ನು ಕೆಣಕುವ ಸಾಹಸ ಮಾಡಿ ಆತ್ಮನಾಶ ಮಾಡಿಕೊಳ್ಳಲುದ್ಯುಕ್ತನಾದನೆಂದು ಅವನು ತಿಳಿದನು. ಅಪಾರವಾದ ಸೈನ್ಯದೊಂದಿಗೆ ವೇಲಂ ಪಟ್ಟಣಕ್ಕೆ ದಂಡಯಾತ್ರೆಗಾಗಿ ತೆರಳುವದನ್ನು ಅವನು ನಿಶ್ಚಯಿಸಿದನು. ಅವನ ಮಂತ್ರಿಯಾದ ಮಲಿಕಸೈಫುದ್ದೀನ ಘೋರಿಯಾದರೂ ಅವನ ಈ ವಿಚಾರಕ್ಕೆ ಮತ್ತಿಷ್ಟು ಬಲ ಕೊಟ್ಟನು.

ಆಗ ಯವನರ ಪರ್ವತಪ್ರಾಯವಾದ ಅಪರಾಧಗಳು ಯಾರಿಗೂ ಎದ್ದು ಕಾಣದೆ, ಹಿಂದುಗಳ ತಿಲಪ್ರಾಯವಾದ ತಪ್ಪುಗಳು ಗುಡ್ಡದಂತೆ ಸರ್ವರಿಗೂ ಕಾಣುತ್ತಿದ್ದವು. ಯಃಕಶ್ಚಿತ ಕಾರವಾನರ ಕುದುರೆಗಳನ್ನು ವಿನಾಯಕದೇವನು ತೆಗೆದುಕೊಂಡದ್ದಕ್ಕೆ, ಅದರಲ್ಲಿಯೂ ಬೆಲೆ ಕೊಟ್ಟು ತೆಗೆದುಕೊಂಡದ್ದಕ್ಕೆ ಶಹನ ಪರ್ವತಪ್ರಾಯವಾದ ಮಾನವು ನಾಶವಾಯಿತು; ಅಲ್ಪ ಕಾರಣದ ಸಲುವಾಗಿ ನಿರಪರಾಧಿ ಜನರನ್ನು ಹಿಡಿದು ಅವರಿಗೆ ದೇಹಾಂತ ಶಾಸನವನ್ನು ವಿಧಿಸಿದ್ದು ಯಾರಿಗೂ ಅಯೋಗ್ಯವೆಂದು ಕಾಣದಿದ್ದ ಮೇಲೆ ಈ ಗುಣಕ್ಕೆ ಏನೆನ್ನಬೇಕೋ ತಿಳಿಯದಾಗಿದೆ! ರಾಷ್ಟ್ರಧರ್ಮವನ್ನು ಮರೆತು ಜಡಸ್ವಾರ್ಥವನ್ನವಲಂಬಿಸಿ ಉದರಂಭರಣ ಮಾಡುವ ಕಾಲದಲ್ಲಿ 'ಜೀ ಖಾವಿಂದ! ಜೀ ಸರಕಾರ!!' ಎಂದು ವಿನಯ ತೋರಿಸುತ್ತ, ಕಾಲಹರಣ ಮಾಡುತ್ತಿದ್ದ ಬಹು ಸಂಖ್ಯಾಕರಿಗೆ ಮುಹಮ್ಮದಶಹನ ತಪ್ಪುಗಳು ಹೇಗೆ ಕಾಣಬೇಕು? ಕಾಲಾಯ ತಸ್ಮೈನಮಃ!

ತನ್ನ ಪುತ್ರನಾದ ಮುಹಮ್ಮದಶಹನು ತಾನೇ ವೇಲಂ ಪಟ್ಟಣದ ದಂಡಯಾತ್ರೆಗೆ ಹೊರಡಲು ಸಿದ್ಧನಾದದ್ದು ನೋಡಿ, ರಾಜಮಾತೆಯಾದ ಮಲಿಕಾಜಹಾನಳು ಅವನ ಪ್ರಯಾಣವನ್ನು ಕಟ್ಟು ಮಾಡಬೇಕೆಂದು ಯೋಚಿಸಿದಳು.

ಅಲ್ಪ ಕಾರಣಕ್ಕಾಗಿ ಇಂತಹ ಸಾಹಸವನ್ನು ಮಾಡುವ ಶಹನ ಆಚರಣೆಯು ಅವಳಿಗೆ ಸರಿದೋರಲಿಲ್ಲ. 'ಬ್ರ' ಎಂದರೆ ಬ್ರಹ್ಮಹತ್ಯೆ ಮಾಡಿದೆಯೆಂದು ಅಪರಾಧ ಹೊರಿಸುವ ಶಹನು ಮಾತೆಯ ಮಾತಿನ ಕಡೆಗೆ ಲಕ್ಷ್ಯಗೊಡುವನೆ? ಅವನು ತನ್ನ ಹಟವನ್ನು ಬಿಡದ್ದು ನೋಡಿ, ಮಲಿಕಾಜಹಾನಳಿಗೆ ಬಳ್ಳೆಯ ಖೇದವೆನಿಸಿತು. ಆ ಖೇದದೊಡನೆ ಕ್ರೋಧವು ದ್ವಿಗುಣಿತವಾಯಿತು. ಆಗ ಅವಳು ಸಿಟ್ಟನ್ನು ತಡೆದುಕೊಂಡು:—

"ಕುಮಾರಾ, ನೀನು ಈ ವಿಷಯದಲ್ಲಿ ಹಟ ಹಿಡಿಯಬೇಡ. ಕಾರವಾನರಿಗೆ ಬೆಲೆ ಕೊಟ್ಟು ಕುದುರೆಗಳನ್ನು ತೆಗೆದುಕೊಂಡರೆ ವಿನಾಯಕದೇವನು ಅಪರಾಧ ಮಾಡಿದಂತಾಗಲಿಲ್ಲ. ಇನ್ನೊಮ್ಮೆ ಉತ್ತಮವಾದ ಕುದುರೆಗಳನ್ನು ತರುವದಕ್ಕೆ ಕಾರವಾನರಿಗೆ ಹೇಳು. ವಿನಾಯಕದೇವನು ಕೆಲವು ಕುದುರೆ ತೆಗೆದುಕೊಂಡನೆಂದು ಜಗತ್ತಿನಲ್ಲಿ ಕುದುರೆಗಳೇ ಇಲ್ಲದಂತಾಗುವವೇನು? ನೀನು ವೃಥಾ ದುರಾಗ್ರಹವನ್ನು ಹಿಡಿಯದೆ ದಂಡಯಾತ್ರೆಯನ್ನು ಬಿಟ್ಟುಗೊಡು."

"ಮಾತೇ, ಕುದುರೆಗಳನ್ನು ತೆಗೆದುಕೊಂಡ ಮಾತು ಅಷ್ಟೊಂದು ಮಹತ್ವದ್ದಾಗಿರದಿದ್ದರೂ ಅದರಲ್ಲಿ ಬಾಮನೀ ಬಾದಶಹನ ಅಪಮಾನವಿರುವದೆಂಬದು ನಿಮ್ಮ ಲಕ್ಷ್ಯದಲ್ಲಿ ಬರಲೊಲ್ಲದು. ಈಗ ಹಿಂದುಗಳು ಬಹಳೇ ಉನ್ಮತ್ತರಾಗಿರುವರು. ಅವರ ಮದವನ್ನು ವೇಳೆವೇಳೆಗೆ ಇಳಿಸದಿದ್ದರೆ ಪರಕೀಯರಾದ ನಾವು ಇಲ್ಲಿ ಬಾಳಿಕೊಂಡಿರುವದು ಕಠಿಣವಾದೀತು. ಅಲ್ಲಾವುದ್ದೀನ ಹಸನಗಂಗುವಿನ-ಬಾಮನೀ ಸಿಂಹಾಸನ ಸ್ಥಾಪಕನ-ಪುತ್ರನು ಇಂತಹ ಅಪಮಾನವನ್ನು ಎಂದೂ ಸಹಿಸುವದಿಲ್ಲ ಕಂಡಿರಾ!"

"ಅಲ್ಲಾನ ಕರುಣೆಯಿರುವದರಿಂದ ನಿಮ್ಮ ಅಟ್ಟಹಾಸವು-ಮುಹಮ್ಮದೀಯರ ಆಡಂಬರವು-ಈ ಭರತಭೂಮಿಯಲ್ಲಿ ನಡೆದಿರುವದು. ಅಲ್ಲಾನ ಪ್ರೇರಣೆಯಿರುವದೆಂದು ತೀರ ಅನ್ಯಾಯದಿಂದ ಆಚರಿಸಬಾರದೆಂದು ನನ್ನ ಅಭಿಪ್ರಾಯವಿದೆ. ಅನ್ಯಾಯವು ಬಹು ದಿನಗಳ ವರೆಗೆ ನಡೆಯಲಾರದೆಂಬ ಮಾತು ತ್ರಿಕಾಲಾಬಾಧಿತವಿರುವದು. ವಿನಾಯಕದೇವನಲ್ಲಿ ಇಲ್ಲದ ಅಪರಾಧಗಳನ್ನು ಕಲ್ಪಿಸುವೆ. ಅಂತಹ ಅಪರಾಧಗಳು ನಿನ್ನಿಂದ ಘಟಿಸಿಲ್ಲವೆ? ಮುಹಮ್ಮದೀಯರ ಅತ್ಯಾಚಾರಗಳಿಂದ ಸಾಧುಭಾವದಹಿಂದುಗಳು ಬೆಂಡುಬೆಂಡಾಗಿ ಹೋಗಿರುವದು ಪ್ರತ್ಯಕ್ಷ ಪ್ರಮಾಣದ ಮಾತಾಗಿರುವದು. ಹಿಂದುಗಳ ಕೈಯಲ್ಲಿ ರಾಜ್ಯವಿರಲಾಗದು; ಅವರು ಸಂಪತ್ತುಳ್ಳವರಾಗಿರಬಾರದು; ಹಿಂದುಗಳಲ್ಲಿ ಸುಂದರ ಸತಿಯರಿರಲಾಗದು; ಹಿಂದುಸ್ತಾನದಲ್ಲಿ ಹಿಂದುಧರ್ಮವು ಕಾಣಬಾರದು, ಇವೇ ಮೊದಲಾದ ಆಸುರೀ ಮಹತ್ವಾಕಾಂಕ್ಷೆಯಿಂದ ಮುಹಮ್ಮದೀಯರು

ಅನಂತ ಅನ್ಯಾಯಗಳನ್ನು ಮಾಡಿ ತಮ್ಮ ಇತಿಹಾಸವನ್ನು ದೂಷಿತ ಮಾಡಿಕೊಂಡಿರುವದು ಯಾರಿಗೆ ಅರಿಯದ ಮಾತಾಗಿದೆ? ಮಹಮ್ಮದ, ಇನ್ನು ದುರಾಕಾಂಕ್ಷೆಯು ಸಾಕು. ಇಷ್ಟು ದಿನಗಳ ವರೆಗೆ ಅಲ್ಲಾನ ಅಂತಃಕರಣದಿಂದ ಸುಖಪಟ್ಟದ್ದು ಸಾಕು. ಇದ್ದ ರಾಜ್ಯವನ್ನು ಕೈಯಲ್ಲಿಟ್ಟುಕೊಂಡಿದ್ದರೆ ಕಡೆತನಕ ಸೌಖ್ಯ ಪಡೆಯಬಹುದು. ಹೆಚ್ಚಿನ ದುರಾಶೆ ಬೇಡ. ಹಿಂದುಗಳಲ್ಲಿ ಐಕ್ಯಬುದ್ಧಿ, ಮಾತೃಭೂಮಿಯ ವಿಷಯದ ಪ್ರೇಮ ಮೊದಲಾದ ಸದ್ಭಾವನೆಗಳು ಜಾಗೃತವಿಲ್ಲದ್ದರಿಂದ, ಮುಹಮ್ಮದೀಯರಾದ ನಿಮ್ಮ ಮನಸೋಕ್ತ ಆಚರಣೆಗಳು ಯಥೇಷ್ಟವಾಗಿ ನಡೆದಿರುವವು. ಒಂದುವೇಳೆ ಅವರು ಒಮ್ಮೆಲೆ ಒಕ್ಕಟ್ಟಾಗಿ ಮುಗಿಬಿದ್ದರೆ, ಭರತಭೂಮಿಯೊಳಗಿನ ಎಲ್ಲ ಮುಸಲಮಾನೀ ಸಿಂಹಾಸನಗಳು ಅವರ ಒಂದೇ ಹೊಡತಕ್ಕೆ ಖೈಬರಘಟ್ಟದಾಚೆಗೆ ಬೀಳಬಹುದೆಂಬ ಮಾತನ್ನು ಲಕ್ಷ್ಯದಲ್ಲಿಟ್ಟುಕೊಂಡು ಆಚರಿಸೆಂದರಾಯಿತು!''

ಮಲಿಕಾಜಹಾನಳ ಹಿತೋಕ್ತಿಗಳು ಮುಹಮ್ಮದಶಹನಿಗೆ ಸರಿದೋರಲಿಲ್ಲ. ಅವನು ಎಷ್ಟೇ ಮಾತೃವತ್ಸಲನಿದ್ದರೂ, ಅವಳ ಆಜ್ಞೆಯಂತೆ ಆಚರಿಸುವವನಿದ್ದರೂ ಈ ವಿಷಯದಲ್ಲಿ ಅವಳ ಮಾತನ್ನು ಅಲ್ಲಗಳೆಯುವದಕ್ಕೆ ಹಿಂಜರಿಯಲಿಲ್ಲ.

''ನೀವು ಹುಚ್ಚುತನದ ಮಾತನಾಡಿದಿರಿ. ಹಿಂದುಗಳ ವಿಷಯಕ್ಕೆ ಮುಹಮ್ಮದೀಯರು ಈ ಪ್ರಕಾರದ ಸಹಾನುಭೂತಿಯನ್ನು ತೋರಿಸದಿದ್ದರೆ, ಭರತಭೂಮಿಯಲ್ಲಿ ಮುಹಮ್ಮದೀಯ ಪದಪಾತಶಾಹಿಯು ಸ್ಥಾಪಿಸಲ್ಪಡುತ್ತಿರಲಿಲ್ಲ. ರಾಜ್ಯವಿಸ್ತಾರ, ಧರ್ಮಪ್ರಸಾರ ಮಾಡುವಾಗ ದಯಾ ದಾಕ್ಷಿಣ್ಯಗಳಿಗೆ ಎಡೆಗೊಟ್ಟರೆ ಕಾರ್ಯಗಳಾಗುವವೆ? ಹೊತ್ತು ಬಂದಂತೆ ಕೊಡೆ ಹಿಡಿಯುತ್ತ ಹೋದರೇನೇ ಕಾರ್ಯಗಳಾಗುವವು. ಬಲವಂತರಾದವರು ಬಲಹೀನರನ್ನು ಮುರಿಬಡಿದು, ಏಕಛತ್ರಾಧಿಪತ್ಯವನ್ನು ಪ್ರಸ್ಥಾಪಿಸುವದಕ್ಕೆ ಅಡ್ಡಿಯೇನು? ಹಿಂದುಗಳ ಸೌಖ್ಯದ ಕಡೆಗೆ ನೋಡತೊಡಗಿದರೆ ಮುಹಮ್ಮದೀಯ ಪ್ರಜೆಗಳಿಗೆ ಹೇಗೆ ಸುಖವು ಲಭಿಸಬೇಕು? ಅತ್ಯಂತ ಸಾಹಸಪಟ್ಟು ದೇಶ ಬಿಟ್ಟು ದೇಶಕ್ಕೆ ಬಂದಮೇಲೆ ನಮ್ಮ ಸುಖ-ದುಃಖಗಳ ಕಡೆಗೆ ನೋಡಿಕೊಳ್ಳದೆ, ಕಾಫರರ ಹಿತಕ್ಕಾಗಿ ಯತ್ನಿಸಬೇಕೆನ್ನುವದು ದಡ್ಡತನವಲ್ಲವೇ?'

''ಮುಹಮ್ಮದ, ನೀನು ಉದ್ಧಾಮತನದ ಮಾತನಾಡುವೆ. ಈ ಬಗೆಯ ಮದಾಂಧತೆಯು ಕಡೆಗಾಣಿಸುವದಿಲ್ಲವೆಂಬದಿಷ್ಟೇ ಅಲ್ಲ; ಮನುಷ್ಯನ ಏಳ್ಗೆಯನ್ನು ಕುಗ್ಗಿಸುವದು. 'ಹಿಂದುಸ್ಥಾನವು ಹಿಂದುಗಳ ಸೌಖ್ಯಕ್ಕಾಗಿ ಇರುವದ'ಲ್ಲದೆ, ಪರಕೀಯರಾದ ನಿಮ್ಮ ಸೌಖ್ಯಕ್ಕಾಗಿ ಇಲ್ಲ. ಅವರ ಮನಸ್ಸು ದೊಡ್ಡದಿರುವದರಿಂದ ನಿಮಗೆ ಎಡೆಗೊಟ್ಟಿರುವರು. ನಿಮ್ಮ ಜನ್ಮಭೂಮಿಯನ್ನು ಕೈಯಲ್ಲಿ

ತೆಗೆದುಕೊಂಡು ಮುಹಮ್ಮದೀಯರಾದ ನಿಮ್ಮನ್ನು ಪಾರತಂತ್ರ್ಯದಲ್ಲಿ ಕೆಡಹಿ, ಇಲ್ಲದ ಕಾರಭಾರವನ್ನು ಯಾರಾದರೂ ಮಾಡತೊಡಗಿದರೆ, ನಿಮ್ಮ ಮನಸ್ಸಿನ ಸ್ಥಿತಿಯು ಹೇಗಾಗುವದೆಂಬದನ್ನು ಕೇವಲ ಕಲ್ಪನಾದೃಷ್ಟಿಯಿಂದ ನೋಡು. ಸತ್ಯಾಸತ್ಯ, ಧರ್ಮಾಧರ್ಮಗಳ ವಿಚಾರವಿಲ್ಲದೆ ನಡೆಯುವ ಮನುಷ್ಯನು ಕೊನೆಗೆ ಅಧೋಗತಿಯನ್ನು ಹೊಂದುವದು ನಿಶ್ಚಯವು. ನೀವು ಇನ್ನೂ ಕೆಲ ದಿನ ಹಿಂದುಸ್ತಾನದಲ್ಲಿ ಬಾಳಬೇಕೆಂದು ಬಯಸುತ್ತಿದ್ದರೆ, ಹಿಂದುಗಳೊಡನೆ ಸಹಾನುಭೂತಿಯಿಂದ ನಡೆಯಿರಿ! ಅವರನ್ನು ಬಾಂಧವರೆಂದು ತಿಳಿಯಿರಿ!! ಅವರನ್ನು ಪಾರತಂತ್ರ್ಯದಲ್ಲಿ ಕೆಡಹಿ, ಅವರ ಸ್ವತ್ತನ್ನು ಅಪಹರಿಸಿಕೊಂಡು ಮುಹಮ್ಮದೀಯರು ಚಿರಕಾಲ ಸೌಖ್ಯಪಡೆಯಬೇಕೆಂದು ಯೋಚಿಸುತ್ತಿದ್ದರೆ, ಅವರ ನಷ್ಟಚರ್ಯೆಯ ದಿವಸಗಳು ಸಮೀಪಕ್ಕೆ ಬಂದಿರುವವೆಂದು ದುಃಖದಿಂದ ಹೇಳಬೇಕಾಗುವದು. ನೀನು ತೆಲಂಗಣದ ಮೇಲೆ ಅನ್ಯಾಯವಾಗಿ ದಂಡೆತ್ತಿ ಹೋಗಬೇಡ.''

''ರಾಜಕಾರಣದಲ್ಲಿ ನಿಮಗೆ ತಿಳಿಯುವದಿಲ್ಲ. ನಾನು ತೆಲಂಗಣದ ಮೇಲೆ ದಂಡೆತ್ತಿ ಹೋಗುವದನ್ನು ಬಿಡಲಾರೆನು'' ಎಂದು ಮುಹಮ್ಮದಶಹನು ಉದ್ದಾಮತನದಿಂದ ನುಡಿದನು.

---

## ಅಮೃತವು ವಿಷ!



ಮುಹಮ್ಮದಶಹನು ರಾಮದೇವನ ಕೊಲೆ ಮಾಡಿಸಿದ ಸಂಗತಿಯು ವಿಮಲಾದೇವಿಗೆ ತಿಳಿದೊಡನೆಯೇ ಅವಳಿಗೆ ವಿದ್ಯುತ್ಪಾತವಾದಂತಾಯಿತು. ಪತಿಮರಣವಾರ್ತೆಯು ಅವಳಿಗೆ ಅಸಹ್ಯವೆನಿಸಿತು. ಇನ್ನು ಲೋಕದಲ್ಲಿ ಬದುಕಿರಬಾರದೆಂದು ಅವಳು ನಿಶ್ಚಯಿಸಿದಳು. ಜಗತ್ತು ಅವಳ ಪಾಲಿಗೆ ಇದ್ದೂ ಇಲ್ಲದ ಹಾಗೆ ತೋರಹತ್ತಿತು. ಪತಿದುಃಖದಿಂದ ಪ್ರಳಾಪಿಸಿ ಅವಳ ನೇತ್ರಗಳೊಳಗಿನ ಜಲವು ಬತ್ತಿತು; ಕಂಠವು ಶೋಷಿಸಿತು; ನವ ತನುವಲ್ಲರಿಯು ಬಾಡಿತು; ದಿವ್ಯತರವಾದ ಅವಳ ಲಾವಣ್ಯವು ಮಾಯವಾಯಿತು; ತನುಕಾಂತಿಯು ಕಳೆಗುಂದಿತು; ಅವಳ ಸೌಭಾಗ್ಯಸೂರ್ಯನು ಅಸ್ತಮಿಸಿದ್ದರಿಂದ ದುರ್ಭಾಗ್ಯತಮವು ಅವಳನ್ನು ಆವರಿಸಿತು; ಸೌಖ್ಯದ ಆಶಾತಂತುಗಳೆಲ್ಲವೂ ಹರಿದು ಹೋಗಿ ಮನಸ್ಸು ವ್ಯಗ್ರವಾಯಿತು. ಹೀಗೆ ಅವಳ ಅಂತರಂಗ-ಬಹಿರಂಗಗಳು ಕ್ಷಣ ಹೊತ್ತಿನಲ್ಲಿ ಭಯಂಕರವಾಗಿ ಅಭ್ಯಂತರವನ್ನೈದಿದವು!

ಇಹಲೋಕದಲ್ಲಿ ಜೀವಿಸಿರುವದಕ್ಕೆ ಯಾವ ಸಾಧನಗಳೂ ಉಳಿಯದ್ದರಿಂದ, ನಿರಾಧಾರಿಯೂ ನಿರ್ಭಾಗ್ಯಳೂ ಆದ ವಿಮಲಾದೇವಿಯು ವಿಷಪಾನ

ಮಾಡಿ ಪತಿಸನ್ನಿಧಿಯನ್ನು ಹೊಂದಬೇಕೆಂದು ಆತುರಗೊಂಡಿದ್ದಳು. ಅವಳು ಅತ್ಯಂತ ಪ್ರಖರವಾದ ವಿಷವನ್ನು ಬಟ್ಟಲಲ್ಲಿ ಹಾಕಿಕೊಂಡು ಕುಡಿಯಬೇಕೆನ್ನು ವಷ್ಟರಲ್ಲಿ ಯಾರೋ ಹಿಂದಿನಿಂದ ಬಂದು: —

"ವಿಮಲೆ, ಇದೇನು ಅನುಚಿತವು?" ಎಂದು ನುಡಿದು, ಅವಳ ಕೈಯೊಳಗಿನ ವಿಷದ ಪೇಲೆಯನ್ನು ಕಸಿದೊಗೆದರು!

ಈ ಕೃತಿಯನ್ನು ನೋಡಿ ವಿಮಲಾದೇವಿಯು ಬೆಚ್ಚಿಬಿದ್ದು, ಹಿಂದಿರುಗಿ ನೋಡುತ್ತಾಳೆ; ವಿಕ್ರಮದೇವನು ಮೂರ್ತಿಮಂತಾಗಿ ನಿಂತುಕೊಂಡಿದ್ದನು! ಅವನ ಮುಖವನ್ನು ನೋಡಿದೊಡನೆಯೆ ವಿಮಲಾದೇವಿಯು ನಖ ಶಿಖಾಂತವಾಗಿ ಉರಿಯುತೊಡಗಿದಳು. ತನ್ನ ಪತಿಯ ಮರಣಕ್ಕೆ ಕುಲಾಂಗಾರನಾದ ವಿಕ್ರಮ ದೇವನೇ ಕಾರಣನಾದುದರಿಂದ, ಅವಳಿಗೆ ಎಷ್ಟು ಸಂತಾಪವಾಗಿರಬಹುದೆಂಬ ದನ್ನು ಹೇಳುವದು ಅಸಾಧ್ಯವೇ ಸರಿ. ಅವಳು ವಿಕ್ರಮದೇವನನ್ನು ಕುರಿತು ಕ್ರೋಧೋನ್ಮತ್ತಸ್ವರದಿಂದ: —

"ದುಷ್ಟಾ! ನರಪಿಶಾಚಿ! ಮನಃಪೂರ್ವಕವಾಗಿ ಪತಿಯನ್ನು ಕೊಲ್ಲಿಸಿದ ಪರಮನೀಚನಾದ ನೀನು ನನ್ನ ಮರಣಕ್ಕೆ ಏಕೆ ಅಡ್ಡಾದೆ? ಮೂರ್ಖಾ, ಮಿತ್ರತ್ವದ ನೋಗಿನಿಂದ ಒಳ್ಳೆಯ ಉಪಕೃತಿಯನ್ನು ಮಾಡಿದೆ! ನನ್ನ ಪ್ರಾಣನಾಥರಿಂದ ನಿನಗೆ ಎಂದಾದರೂ ಅನಿಷ್ಟವೊದಗಿದ್ದರೆ ಹೇಳಬಾರದೆ? ನಿನ್ನಂತಹ ಮಿತ್ರದ್ರೋಹಿಯ ಸ್ನೇಹವನ್ನು ಒಳಿಯಿಸಿ, ಅವರು ಆತ್ಮಘಾತ ಮಾಡಿಕೊಂಡರು. ಕುಲಾಂಗಾರಾ! ನಾನು ವಿಷಪಾನ ಮಾಡಿ ದೇಹವಿಡಬೇಕೆಂದು ನಿಶ್ಚಯಿಸಿದ್ದೆನು! ನಿನ್ನನ್ನು ನೋಡಿದ ಕೂಡಲೆ ನನ್ನ ಆ ತಿಳುವಳಿಕೆಯು ಬದಲಾಯಿತು. ನಿನ್ನನ್ನು ಕೊಂದು ನನ್ನ ಪತಿಯನ್ನು ವಧಿಸಿದ 'ಸೇಡು' ತೀರಿಸಿಕೊಂಡ ಹೊರತು, ನಾನು ವಿಷಪಾನ ಮಾಡುವದಿಲ್ಲ! ಇದೇ ನನ್ನ ಪ್ರತಿಜ್ಞೆಯು!!"

"ವಿಮಲೇ, ಆ ದುರ್ದೈವಿಯಾದ ರಾಮದೇವನ ಮರಣದಿಂದ ದುಃಖಿತಳಾಗಿ ಹೀಗೆ ನುಡಿಯಬಹುದೇ? ಈ ವಿಕ್ರಮನಿರುವ ವರೆಗೆ ನೀನು ಯಾವ ವಿಧದಚಿಂತೆಯನ್ನೂ ಮಾಡುವ ಕಾರಣವಿಲ್ಲ. ನನ್ನ ಸರ್ವ ಸಂಪತ್ತೂ ನಾನೂ ನಿನ್ನ ಹಸ್ತಗತವಾಗಿರುವವೆಂದು ತಿಳಿ. ದೇವೀ, ನೀನು ವಿಷಪಾನ ಮಾಡುವ ಕಾರಣವಿಲ್ಲ. ನಿನ್ನ ಸೌಖ್ಯಕ್ಕಾಗಿ ಈ ನಿನ್ನ ಚರಣದಾಸನು ಸದೈವತತ್ಪರನಿರುವನೆಂದು ತಿಳಿದು ನಿಶ್ಚಿಂತಳಾಗು."

"ಚಾಂಡಾಳಾ, ಬಾಯಿಮುಚ್ಚು! ನಿನ್ನ ಪಾತಕಿಹೃದಯದ ಚಿತ್ರವನ್ನು ನಾನು ಈ ಮೊದಲೇ ಅರಿತವಳಾಗಿರುವೆನು. ನರಾಧಮಾ! ಕುಲಯುವತಿಯರ ಶೀಲವನ್ನು ಸೂರೆ ಮಾಡುವದಕ್ಕಾಗಿ ಇಂತಹ ಘೋರ ಕೃತಿಯನ್ನು ಮಾಡಿ

ದೆಯಾ! ನಿನ್ನಂತಹ ಪಾಪಿಯನ್ನು ಸಾಧ್ವೀಸ್ತ್ರೀಯರ ಚರಣರಜವು ಸಹ ನೋಂಕುವದಕ್ಕೆ ಹೇಸುವದೆಂಬದು ಚಾಂಡಾಲನಾದ ನಿನಗೆ ಹೇಗೆ ತಿಳಿಯು ಬೇಕು? ಸಾಧ್ವಿಯಾದ ಈ ಆರ್ಯಲಲನೆಯ ಮನಸ್ಸಿಗೆ ಅಸಹ್ಯವಾದ ವೇದನೆಯನ್ನುಂಟು ಮಾಡಿ, ಈಗ ಆ ವೇದನೆಯಲ್ಲಿ ಬರೆಯನ್ನು ಕೊಡುವದಕ್ಕೆ ಬಂದಿರುವೆಯಾ? ಪಾಪಿ! ನಡೆ ಇಲ್ಲಿಂದ! ಸಾಧ್ವೀಸ್ತ್ರೀಯನ್ನು ಬಳಲಿಸಿದ ಗೋಳು ನಿನ್ನನ್ನು ಜನ್ಮಜನ್ಮಾಂತರದಲ್ಲಿ ಬಿಡಬೇಡ!''

ವಿಮಲಾದೇವಿಯ ನಿಷ್ಠುರವಾದ ವಾಣಿಯಿಂದ ವಿಕ್ರಮನ ಕ್ರೂರಹೃದಯವು ಭಯಗೊಳ್ಳಲಿಲ್ಲ; ಪಾತಕಕ್ಕೆ ಹಿಂಜರಿಯಲಿಲ್ಲ; ಕೃತಕರ್ಮಕ್ಕಾಗಿ ಪಶ್ಚಾತ್ತಾಪಬಡಲಿಲ್ಲ; ಮನೋಭಿಲಾಷೆಯ ಮುಂದೋಟವು ಹಿಂದೆಗೆಯಲಿಲ್ಲ. ಹೀಗಿರದಿದ್ದರೆ ಆತನಿಗೆ ನೀಚನೆಂದು ಯಾರು ಅನ್ನಬೇಕು?

''ವಿಮಲೇ, ನನ್ನ ಪ್ರಯತ್ನವನ್ನು ನಿಷ್ಫಲವಾಗಿ ಮಾಡಬೇಡ!''

''ಮದಾಂಧಾ! ನಿನ್ನ ಪ್ರಯತ್ನಕ್ಕೆ ಫಲವೀಯುವದಕ್ಕಾಗಿ ಪರಮಾತ್ಮನು ಸದೈವ ಸಿದ್ಧನಿರುವನು. ನೀನಿಷ್ಟು ಆತುರಪಡಬೇಡ! ನಿನ್ನ ಪಾತಕಗಳನ್ನು ಸರ್ವಾಂತರ್ಯಾಮಿಯಾದ ಅವನು ಅರಿತವನಾಗಿರುವನು. ವಿಶ್ವಾಸಘಾತಕಿಯೆ! ಸ್ವಾಮಿದ್ರೋಹಿಯೆ!! ವಿನಾಯಕದೇವನು ಮೂರ್ಖನಿರುವದರಿಂದ ನಿನ್ನಂತಹ ದುಷ್ಟನನ್ನು ನಂಬಿರುವನು! ನೀನಾದರೂ ಅವನ ಕುತ್ತಿಗೆಯನ್ನು ಕೊಯ್ಯುವದಕ್ಕೆ ಸಜ್ಜಾಗಿರುವೆ! ವಿಕ್ರಮಾ, ನೀನು ಭಾರತೀಯನಲ್ಲವೆ? ಭಾರತಮಾತೆಯ ಅನ್ನದಿಂದ ನಿನ್ನ ದೇಹವು ಪೋಷಿತವಾಗಿಲ್ಲವೆ? ಆರ್ಯಲಲನೆಯು ನಿನಗೆ ಜನ್ಮವಿತ್ತಿಲ್ಲವೆ? ನರಾಧಮಾ! ನೀನು ಧರ್ಮಾಧರ್ಮ ವಿಚಾರಗಳನ್ನು ಬಿಟ್ಟು ಈ ರೀತಿಯಾದ ಅಧೋಗತಿ ಸಾಧಕಮಾರ್ಗವನ್ನು ಕೈಕೊಂಡೆಯಾ?''

ವಿಮಲಾದೇವಿಯ ಈ ಮಾತುಗಳನ್ನು ಕೇಳಿ ವಿಕ್ರಮದೇವನು ಬೆರಗಾದನು. ತನ್ನ ಗುಪ್ತಕಾರಸ್ಥಾನಗಳೆಲ್ಲ ಇವಳಿಗೆ ತಿಳಿದಿರುವವೆಂದು ಅವನ ಹೃದಯವು ಕಂಪಿಸತೊಡಗಿತು. ಅವನು ತನ್ನ ಮನಸ್ಸಿನೊಳಗಿನ ಯಾವ ವಿಕಾರವನ್ನೂ ವ್ಯಕ್ತಪಡಿಸದೆ ಗಂಭೀರತನದಿಂದ:—

''ವಿಮಲೇ, ನಾನು ತೆಲಂಗಣದ ವಿಷಯಕ್ಕೆ ಭಕ್ತಿಯುಳ್ಳವನಿರುವೆನು. ನಾನು ರಾಜಕುಮಾರರ ವಿಷಯಕ್ಕೆ ವಿಶ್ವಾಸಘಾತಮಾಡಬೇಕೆಂದು ಇರುವದಿಲ್ಲ. ರಾಮದೇವನ ಕೊಲೆಯ ದೋಷಕ್ಕೆ ನಾನು ಹಿಂಜರಿಯುವದಿಲ್ಲ. ನಿನ್ನಂತಹ ದಿವ್ಯಲಾವಣ್ಯರಾಶಿಯು ದುರ್ಭಾಗ್ಯನ ವಶದಲ್ಲಿರಬಾರದೆಂದು ನನ್ನ ಇಚ್ಛೆಯಿದ್ದುದರಿಂದ ಹೀಗೆ ಮಾಡಿದೆನು. ಇಂದುಮುಖೀ, ಈ ವಿಕ್ರಮನಲ್ಲಿ ಯಾವದಕ್ಕೆ ಕೊರತೆಯಿರುವದು? ನನ್ನ ದೈವವು ಒಳಿತಾಗಿರುವದರಿಂದ ಪರಮಾತ್ಮನು

ಯಾವದೊಂದು ರಾಜ್ಯದ ಸ್ವಾಮಿತ್ವವನ್ನು ದಯಪಾಲಿಸುವನೆಂಬ ನಂಬಿಗೆಯು ನನಗೆ ಪೂರ್ಣವಾಗಿರುವದು. ರಾಜನ ರಾಣಿಯಾಗಿ ಸುಖಬಡುವದಕ್ಕೆ ನೀನು ಒಲ್ಲೆನೆಂದರೆ ಅದು ನಿನ್ನ ದಡ್ಡತನವೇ ಸರಿ. ಕೇವಲ ನಿನ್ನ ಸೌಖ್ಯಕ್ಕಾಗಿ ನಾನು ಅಲ್ಲದ ಕಾರ್ಯಗಳನ್ನು ಮಾಡಿದ್ದು, ಈಗ ನನ್ನ ಶ್ರಮವನ್ನು ವ್ಯರ್ಥಗೊಳಿಸ ಬೇಡ. ಪ್ರಿಯೇ! ನೀನು ನನ್ನ ಹೃದಯದೇವತೆಯು! ನಿನ್ನ ಹೃದಯಮಂದಿರ....''

''ಮೂರ್ಖಾ! ಬಾಯಿಮುಚ್ಚು! ಉನ್ಮತ್ತನಾಗಿ ಮನಬಂದಂತೆ ಮಾತ ನಾಡಿದರೆ ನಿನ್ನ ಪರಿಣಾಮವು ಒಳಿತಾಗಲಿಕ್ಕಿಲ್ಲ!'' ಎಂದು ವಿಮಲಾದೇವಿಯು ಸಂತಪ್ತಳಾಗಿ ನುಡಿದ ಕೂಡಲೆ ವಿಕ್ರಮನು ಅವಳ ಮಾತಿನ ಕಡೆಗೆ ಲಕ್ಷ್ಯ ಗೊಡದೆ: —

''ಲಾವಣ್ಯವತೀ! ನನ್ನನ್ನು ತಿರಸ್ಕರಿಸಬೇಡ!'' ಎಂದು ಅವಳ ಕೈಯ ನ್ನು ಹಿಡಿಯುವದಕ್ಕೆ ಮುಂದಾದನು.

''ಕುಲಾಂಗಾರಾ! ಮುಂದೆ ಬರಬೇಡ! ನರಪಿಶಾಚೀ! ನೀನು ನಿನ್ನ ಕ್ಷತ್ರಿಯ ಧರ್ಮವನ್ನು ಮರೆತು ಚಾಂಡಾಲವೃತ್ತಿಯನ್ನು ಕೈಕೊಂಡೆ! ನಿಜ ವಾದ ಕ್ಷತ್ರಿಯ ವೀರರು ಆರ್ಯಲಲನೆಯರ ಶೀಲರಕ್ಷಣೆಗಾಗಿ ತಮ್ಮ ರಕ್ತ ದಿಂದ ರಣದೇವತೆಗೆ ಅಭಿಷೇಕ ಮಾಡಿದರು. ಅಧಮ ಕ್ಷತ್ರಿಯನಾದ ನೀನು ಆರ್ಯಲನೆಯ ಶೀಲವನ್ನು ಸೂರೆಗೈಯುವದಕ್ಕೆ ಸಿದ್ಧನಾಗಿರುವೆಯಲ್ಲವೆ? ಧಿಃಕಾರ ನಿನ್ನ ಜನ್ಮಕ್ಕೆ!''

''ಪ್ರಿಯೆ! ಧಿಃಕರಿಸು! ಧಿಃಕರಿಸು! ನೀನು ತಿರಸ್ಕರಿಸಿದಂತೆ ನನ್ನಲ್ಲಿ ನಿನ್ನ ವಿಷಯದ ಪ್ರೇಮಭಾವನೆಯು ದ್ವಿಗುಣಿತವಾಗುತ್ತ ಹೋಗುತ್ತದೆ. ವಿಮಲೆ! ನನ್ನ ಕೈಯೊಳಗಿಂದ ಜಾರಿಹೋಗುವ ಸಾಮರ್ಥ್ಯವು ನಿನ್ನಲ್ಲಿಲ್ಲದಿರುವಾಗ ವೃಥಾ ಸಾಹಸ ಮಾಡಿ ದಣಿಕೊಳ್ಳಬೇಡ. ನಿನ್ನ ಸುಖಕ್ಕಾಗಿಯೇ ನಾನು ಯತ್ನಿಸು ತ್ತಿರುವೆನು. ಹೀಗಿರಲು, ನನ್ನ ಕೈಯಿಂದ ಪಾರಾಗುವ ಅಸಾಧ್ಯ ಕಾರ್ಯಕ್ಕೆ ಕೈಹಾಕುವದೇಕೆ?''

ವಿಕ್ರಮನು ಹೀಗೆ ನುಡಿದು ಅಷ್ಟಕ್ಕೆ ಸುಮ್ಮನಾಗದೆ ತನ್ನ ತಾಮಸವೃತ್ತಿ ಗನುಗುಣವಾಗಿ ವಿಮಲಾದೇವಿಯ ಬಳಿಗೆ ಹೋಗಿ ಅವಳ ಕೈ ಹಿಡಿದು: —

''ಪ್ರಿಯೆ! ನನ್ನನ್ನು ಕೃತಾರ್ಥನನ್ನಾಗಿ ಮಾಡು!''

ವಿಕ್ರಮನು ತನ್ನ ಅಂಗಸ್ಪರ್ಶ ಮಾಡಿದ್ದರಿಂದ, ಪತಿವ್ರತಾ ಭಾವನೆಯು ಅತ್ಯಂತ ಜಾಗ್ರುತಾವಸ್ಥೆಯಲ್ಲಿದ್ದ ವಿಮಲಾದೇವಿಯು ಸಂತಾಪಾತಿಶಯದಿಂದ ದೇಹಭಾನವಿಲ್ಲದವಳಾದಳು. ಪತಿಮರಣವ್ಯಥೆಯಿಂದ ಅವಳು ಅತ್ಯಂತ ಕ್ಷೀಣ ಳಾಗಿದ್ದರೂ ಅವಳ ದೇಹದಲ್ಲಿ ಇಲ್ಲದ ಆವೇಶವು ಬಂದಿತು. ಅತ್ಯಂತ ಪವಿತ್ರ

ವಾದ ತನ್ನ ದೇಹವನ್ನು ಅವನು ಪಾಪಬುದ್ಧಿಯಿಂದ ಸೊಂಕಿದ್ದರಿಂದ ಅದು ಅಪವಿತ್ರವಾಯಿತೆಂದು ಅವಳು ಭಾವಿಸಿದ್ದರಿಂದ ಕ್ರುದ್ಧಳಾಗಿ, ವಿಕ್ರಮನ ಕೈ-ಯಿಂದ ತನ್ನ ಕೈಯನ್ನು ಬಿಡಿಸಿಕೊಂಡವಳೇ ಅವನ ಎದೆಗೆ ಒಳ್ಳೆಯ ಕಸುವಿನಿಂದ ಒದ್ದಳು! ಅವಳ ಪಾದಹತಿಯಿಂದ ವಿಕ್ರಮನು ದೊಪ್ಪನೆ ನೆಲಕ್ಕೆ ಬಿದ್ದನು! ಕೂಡಲೆ ಅವಳು ಮಹಿಷಾಸುರಮರ್ದಿನಿಯಂತೆ ರೋಷಗೊಂಡು ತನ್ನ ಉಡಿಯಲ್ಲಿ ಟ್ಟಿದ್ದ ಕೈಕತ್ತಿಯನ್ನು ಹೊರಗೆ ತೆಗೆದು:-"ಥೂ! ಚಾಂಡಾಲಾ! ಅನುಭವಿಸು ಕೃತ ಕರ್ಮಪ್ರಾಯಶ್ಚಿತ್ತವನ್ನು!" ಎಂದು ನುಡಿದವಳೇ ಅದನ್ನು ವಿಕ್ರಮನ ಮೇಲೆ ಒಳ್ಳೇ ಶಕ್ತಿಯಿಂದ ಎಸೆದಳು! ಕೂಡಲೆ ಅದು ಅವನಿಗೆ ಬಡಿಯದೆ 'ಝಣಲ್' ಎಂದು ನೆಲಕ್ಕೆ ಬಡಿಯಿತು! ಕೂಡಲೆ ಅವನು ಸಾವರಿಸಿಕೊಂಡು ಎದ್ದು ದೂರ ಸರಿದು ನಿಂತು:—

"ವಿಮಲೆ! ಇದೇನು ರಕ್ಕಸತನವನ್ನು ನಡೆಯಿಸಿದೆ?" ಎಂದು ಭಯ ಚಕಿತನಾಗಿ ಉದ್ಗಾರ ತೆಗೆದನು.

"ಉಳಿದುಕೊಂಡೆ! ಪಿಶಾಚೀ! ಉಳಿದುಕೊಂಡೆ! ನಿನ್ನ ತಾಯಿಯ ಹೊಟ್ಟೆಯು ತಣ್ಣಗಿರುವದರಿಂದ ನನ್ನ ಕೈಯಿಂದ ಪಾರಾಗಿ ಉಳಿದುಕೊಂಡೆ!" ಎಂದು ವಿಮಲಾದೇವಿಯು ನುಡಿದು ಅಲ್ಲಿಯೇ ಬಿದ್ದಿದ್ದ ಕೈಗತ್ತಿಯನ್ನು ತೆಗೆದು ಕೊಂಡು ಕಠೋರವಾಣಿಯಿಂದ:—

"ಅನ್ಯಾಯದಿಂದ ನನ್ನ ಪತಿಯ ಕೊಲೆ ಮಾಡಿಸಿ ಸಾಧ್ವಿಯಾದ ನನ್ನ ಶೀಲವನ್ನು ನಾಶಮಾಡಬಂದ ನರಾಧಮನಾದ ನಿನ್ನ ಹೃದಯದಲ್ಲಿ ಈ ನನ್ನ ಖಡ್ಗಕ್ಕೆ ಸ್ಥಾನವನ್ನು ಕೊಡದಿದ್ದರೆ ನಾನು ವಿಮಲಾದೇವಿಯೇ ಅಲ್ಲ. ನನಗೆ ಜಗತ್ತಿನಲ್ಲಿ ಎಲ್ಲ ಆಧಾರತಂತುಗಳು ಕಡಿದು ಹೋಗಿದ್ದರೂ ನನ್ನ ಈ ಪ್ರತಿಜ್ಞೆಯು ಈಡೇರುವದಕ್ಕಾಗಿಯೇ ಜೀವಿಸುವೆನು!" ಎಂದು ವಿಮಲಾದೇವಿಯು ಉದ್ಗಾರ ತೆಗೆಯಲು ವಿಕ್ರಮನು ಆರ್ಭಟೆಯಿಂದ:—

"ಪತಿಮರಣದ ದುಃಖದಲ್ಲಿ ಈಗ ನೀನು ನನ್ನನ್ನು ತಿರಸ್ಕರಿಸಿರುವೆ. ಕೆಲವು ದಿನಗಳು ಗತಿಸಿದ ಮೇಲೆ ನೀನಾಗಿ ನನ್ನ ವಶಳಾಗುವೆ. ತೆಲಂಗಣದ ಭಾವೀರಾಜನಾದ ನನ್ನ ರಾಣಿಯಾಗುವದಕ್ಕೆ ಸುಜ್ಞಳಾದ ನೀನು ಎಂದೂ ಅಸಮ್ಮತಿಯನ್ನು ತೋರಿಸಲಾರೆ. ಕಾಲವು ಬರಲಿ ನೋಡೋಣ!" ಎಂದು ವಿಕ್ರಮನು ನುಡಿದ ಕೂಡಲೆ ವಿಮಲಾದೇವಿಯು ಮತ್ತಿಷ್ಟು ಸಂತಾಪಯುಕ್ತಳಾಗಿ:—

"ವಿಕ್ರಮಾ! ನೀನು ಇಲ್ಲಿಂದ ಹೋಗದಿದ್ದರೆ ಪ್ರಾಣಕ್ಕೆ ಎರವಾಗುವೆ. ನಾನಂತೂ ಪ್ರಾಣದ ವ್ಯಾಮೋಹವನ್ನು ಬಿಟ್ಟವಳಾಗಿರುವೆನು. ವೀರಪತ್ನಿ

ಯಾದ ಈ ಕ್ಷತ್ರಿಯ ರಮಣಿಯ ಕೈಯನ್ನು ಚನ್ನಾಗಿ ನೋಡು,'' ಎಂದು ವಿಮಲಾದೇವಿಯು ತನ್ನ ಕೈಯಲ್ಲಿ ಖಡ್ಗವನ್ನುತೆಗೆದುಕೊಂಡು ವಿಕ್ರಮನ ಮೇಲೆ ಧಾವಿಸಿ ಹೋದಳು. ಪ್ರಸಂಗವು ಮೈಮೇಲೆ ಬಂದದ್ದರಿಂದ ಅವನು:-

''ವಿಮಲೆ! ನಿನ್ನನ್ನು ಇಂದೇ ಕಾರಾಗ್ರಹದಲ್ಲಿ ಹಾಕಿಸುವೆನು.'' ಎಂದು ನುಡಿದವನೇ ಅಲ್ಲಿಂದ ಹೊರಡಲುದ್ಯುಕ್ತನಾದನು. ಆಗ ವಿಮಲಾದೇವಿಯು ಅವನದುರ್ವರ್ತನವನ್ನು ನೋಡಿ ವ್ಯಸನಪಡುತ್ತ:—

''ವಿಕ್ರಮಾ, ನಿನ್ನ ಕಾರಾಗ್ರಹಕ್ಕೆ ನಾನು ಭಯಪಡುವದಿಲ್ಲ. ಜೀವದ ಪರಿವೆಯನ್ನು ಬಿಟ್ಟವಳಿಗೆ ಕಾರಾಗ್ರಹದ ಭಯವೇನು? ನಿನಗೊಂದು ಹಿತೋಕ್ತಿಯನ್ನು ಹೇಳಬೇಕೆಂದಿರುವೆನು. ನೀನು ಯಾವ ಆಶೆಯಿಂದ ದೇಶದ್ರೋಹ, ರಾಜದ್ರೋಹ, ಧರ್ಮದ್ರೋಹ ಮೊದಲಾದವುಗಳನ್ನು ಮಾಡತೊಡಗಿರುವೆಯೋ ಆ ನಿನ್ನ ಬಯಕೆಯು ನಿಷ್ಫಲವಾಗಿ ಅದರಲ್ಲಿ ನಿನ್ನ ನಾಶವಾಗುವದಲ್ಲದೆ, ನಿನ್ನ ನೀಚ ಕೃತಿಯ ಅನಿಷ್ಟ ಫಲವು ಇಡೀ ರಾಜ್ಯಕ್ಕೆ ಪ್ರಾಪ್ತವಾಗುತ್ತದೆ. ನೀನು ಅವಿಚಾರಿಯಿರುವದರಿಂದ ಅಸ್ಥಿರವೈರಿಗಳಾದ ಯವನರನ್ನು ನಂಬಿರುವೆ. ನೀನು ಯಾವ ದುರಾಶೆಯಿಂದ ನನ್ನ ಪತಿಗಳನ್ನು ಕೊಲ್ಲಿಸಿದೆಯೋ ಆ ನಿನ್ನ ಮನೋಭೀಷ್ಟವು ಎಷ್ಟರ ಮಟ್ಟಿಗೆ ಸಿದ್ಧಿಸಿತೆಂಬದು ಇದೀಗಿನ ಅನುಭವದ ಮಾತಾಗಿದೆ. ಇದನ್ನು ನೆನಪಿನಲ್ಲಿಟ್ಟುಕೊಂಡು ಮುಂದಿನ ಕಾರ್ಯ ಮಾಡು. ನೀನು ನನ್ನ ಕಡುತರವಾದ ವೈರಿಯಾಗಿದ್ದರೂ, ನಿನ್ನ ಕುವಿಚಾರದ ಕಟುಫಲಗಳನ್ನು ದೇಶಕ್ಕೆ ದೇಶವೇ ಪಡೆಯಬೇಕಾಗುವದೆಂಬದನ್ನು ನೆನೆದು ನಿನಗೆ ಬೋಧಿಸಿರುವೆನು. ನೀನು ಇನ್ನು ನನ್ನನ್ನು ಬಯಸಿದೆಯಾದರೆ, ಇಲ್ಲವೆ ದೇಶಕ್ಕೆ ಅಹಿತಚಿಂತನೆಯ ಕಾರ್ಯಗಳನ್ನು ಮಾಡಿದೆಯಾದರೆ ಇಗೋ, ಈ ಶಸ್ತ್ರದಿಂದಲೇ ನಿನ್ನನ್ನು ವಧೆಗೊಳಿಸುವೆನೆಂದು ನಿಶ್ಚಯವಾಗಿ ತಿಳಿ!''

''ಆಗಲಾಗಲಿ! ನಿನ್ನ ದೃಢನಿಶ್ಚಯವನ್ನಾದರೂ ಪರೀಕ್ಷಿಸುವೆನು. ಕೋಮಲಾಂಗೀ, ನೀನು ನನ್ನ ಅರ್ಧಾಂಗಿನಿಯಾಗದಹೊರತು, ನಾನು ಈ ರಾಜ್ಯಕ್ಕೆ ಸ್ವಾಮಿಯಾಗದ ಹೊರತು ನನ್ನ ಮನಸ್ಸು ತೃಪ್ತಿಯಾಗುವಂತಿಲ್ಲ. ನಿನ್ನ ಧರ್ಮೋಪದೇಶಕ್ಕೆ ಮರುಳಾಗಿ ಸ್ವೀಕೃತಕಾರ್ಯದಿಂದ ಹಿಂದಿರುಗುವಂತಹ ಹೇಡಿಯು ನಾನಿರುವುದಿಲ್ಲ. ಇನ್ನು ಎಂಟುದಿನಗಳೊಳಗಾಗಿ ನೀನು ನನ್ನ ವಶಳಾಗದಿದ್ದರೆ, ನಿನಗೆ ಕಾರಾಗ್ರಹವಾಸವು ಕಟ್ಟಿಟ್ಟಿರುವದೆಂದು ತಿಳಿ.'' ಎಂದು ನುಡಿದು ಅಲ್ಲಿಂದ ಹೊರಟನು.

ಮರಣ ಸಮೀಪಿಸಿದಾಗ ಅಮೃತವು ವಿಷವಾಗುವದಲ್ಲವೆ?

———

## ದುರ್ದೈವಿಯಾದ ರಾಜಕುಮಾರ!

ವಿಕ್ರಮದೇವನು ತೆಲಂಗಣದ ಅರಸೊತ್ತಿಗಾಗಿ ಜೋತುಗೊಂಡು ಮಹಮ್ಮದ ಶಹಾ ಬಾಮನಿಯೊಡನೆ ಗುಪ್ತಸಂಚು ನಡೆಯಿಸಿದ್ದನು. ಕಾರ್ಯಸಾಧಕನಾದ ಶಹನು ಅವನ ಮಾತಿಗೆ ಒಡಂಬಟ್ಟು, ರಾಜಕುಮಾರನನ್ನು ತನ್ನ ವಶಕ್ಕೆ ಕೊಡ ಬೇಕೆಂದು ವಿಕ್ರಮದೇವನಿಗೆ ತಿಳಿಸಿದ್ದನು. ದಂಡೆತ್ತಿ ಬಂದರೆ ವೇಲಂಪಟ್ಟಣದ ಕೋಟೆಯಲ್ಲಿ ಪ್ರವೇಶವಾಗುವಂತೆ ಮಾಡುವೆನೆಂದು ಅವನಾದರೂ ಶಹನಿಗೆ ಅಭಿವಚನ ಕೊಟ್ಟಿದ್ದನು. ರಾಕ್ಷಸೀ ಮಹತ್ವಾಕಾಂಕ್ಷೆಯುಳ್ಳ ವಿಕ್ರಮದೇವನು ಇಷ್ಟರಿಂದ ತೃಪ್ತನಾಗದೆ, ವಿನಾಯಕದೇವನು ರಾಜಕಾರಣದ ಕಡೆಗೆ ದುರ್ಲಕ್ಷಿಸಬೇಕೆಂದು ಅವನು ಕೃಷ್ಣಸುಂದರಿಯ ಆಶೆ ಹಚ್ಚಿದ್ದನು. ವಿಕ್ರಮದೇವನ ಈ ಕಾರಸ್ಥಾನದಲ್ಲಿ ಕೃಷ್ಣಸುಂದರಿಯ ತಂದೆಯಾದ ಸೋಮಲದೇವನೂ ಅನುಕೂಲನಾಗಿದ್ದನು; ಆದರೆ ಸೇನಾಪತಿಯ ಹೃದಯವನ್ನು ಅವನು ಪೂರಾ ಅರಿತವನಾಗಿರದೆ, ರಾಜಪ್ರೇಮ ಸಂಪಾದನೆಗಾಗಿ ತನ್ನ ಕುವರಿಯನ್ನು ರಾಜಕುಮಾರನಿಗೆ ಅರ್ಪಿಸಬೇಕೆಂದು ಸಜ್ಜಾಗಿದ್ದನು.

ಕೃಷ್ಣಸುಂದರಿಯ ದಿವ್ಯಲಾವಣ್ಯಕ್ಕೆ ರಾಜಕುಮಾರನು ತೀರ ಮುಗ್ಧನಾಗಿದ್ದನು. ಅವಳ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಅವನು ಮೇಲಿಂದ ಮೇಲೆ ಅವಳ ಬಳಿಗೆ ಹೋಗತೊಡಗಿದ್ದನು. ವಿಕ್ರಮದೇವನ ಭೀತಿಯಿಂದ ಅವಳು ತನ್ನ ಮನೋಗತವನ್ನು ಇಷ್ಟು ದಿನಗಳಾದರೂ ತಿಳಿಸಿರಲಿಲ್ಲ. ಮುಗ್ಧ ಭಾವವನ್ನವಲಂಬಿಸಿದ ಕೃಷ್ಣಸುಂದರಿಯು ತನ್ನಲ್ಲೀಗ ಅನುರಕ್ತಳಾಗಿರುವಳೆಂದು ವಿನಾಯಕದೇವನು ಭ್ರಮೆಗೊಳ್ಳತೊಡಗಿದ್ದನ. ಅವನು ದಿನದಿನಕ್ಕೆ ತನ್ನಲ್ಲಿ ಆಸಕ್ತನಾಗತೊಡಗಿದ್ದನ್ನು ನೋಡಿ, ತನ್ನ ಮನೋಗತವನ್ನೊಮ್ಮೆ ತಿಳಿಸಿ ಬಿಡಬೇಕೆಂಬ ವಿಚಾರವು ಕೃಷ್ಣಸುಂದರಿಯ ಮನದಲ್ಲಿ ಹುಟ್ಟಿತು.

"ತೆಲಂಗಣದ ಸಾರ್ವಭೌಮರನ್ನು ನಿರಾಕರಿಸುವಂತಹ ಹುಚ್ಚಿಯು ನಾನಿಲ್ಲವಿದ್ದರೂ ಈಗ ಉಪಾಯವಿಲ್ಲದಾಗಿದೆ."

ಕೃಷ್ಣಸುಂದರಿಯು ತನ್ನ ಮನೆಗೆ ಬಂದ ವಿನಾಯಕದೇವನೊಡನೆ ಮಾತನಾಡುತ್ತ ಕುಳಿತಾಗ ತನ್ನ ಮನೋಭಿಪ್ರಾಯವನ್ನು ಹೀಗೆ ತಿಳಿಸಿದ ಕೂಡಲೆ ಅವನು ಉತ್ಕಂಠೆಯಿಂದ:—

"ಸುಂದರಿ, ನೀನು ಹೀಗೆ ಮಾತನಾಡಿ ನನ್ನ ಮನೋಭಂಗಮಾಡಬೇಡ. ನಿನ್ನ ಗುಣ, ಶೀಲ, ರೂಪಗಳಿಗಾಗಿ ಮನಸೋತ ಈ ರಾಜಕುಮಾರನ ಮನಸ್ಸನ್ನು ನೋಯಿಸಬೇಡ. ನೀನು ನನ್ನನ್ನು ವರಿಸದಿದ್ದರೆ ನಾನು ನಿಶ್ಚಯವಾಗಿಯೂ

ಜೀವಿಸಲಾರೆನು! ಮನಮೋಹಿನೀ, ನೀನು ನನ್ನ ಪ್ರೇಮವನ್ನು ಪರೀಕ್ಷಿಸುವದಕ್ಕಾಗಿ ಹೀಗೆ ಮಾತನಾಡತೊಡಗಿರುವೆಯಾ? ಹಾಗಿದ್ದರೆ ಹೇಳು; ನನ್ನ ಹೃದಯವನ್ನು ಸೀಳಿ ತೋರಿಸುವೆನು. ಆ ಮೇಲಾದರೂ ನಿನಗೆ ನಂಬಿಗೆಯಾದೀತು.''

ವಿನಾಯಕದೇವನು ತನ್ನ ವಿಷಯಕ್ಕೆ ಒಳ್ಳೆಯ ಪ್ರೇಮವುಳ್ಳವನಿರುವನೆಂಬದೂ, ತಾನು ತಿರಸ್ಕರಿಸಿದರೆ ಅವನು ಹೃದ್ರೋಗದಿಂದ ಮೃತಿಯನ್ನೈದುವನೆಂದೂ ಅವಳಿಗೆ ಮನವರಿಕೆಯಾಯಿತು. ಆಗ ಅವಳು ತನ್ನ ಮನೋದಯವನ್ನು ವ್ಯಕ್ತಮಾಡಿಬಿಡಬೇಕೆಂದು ನಿಶ್ಚಯ ಮಾಡಿ:--

''ರಾಜಕುಮಾರರೆ, ಆರ್ಯಲಲನೆಯರು ಎರಡು ಸಾರೆ ವಿವಾಹ ಮಾಡಿಕೊಳ್ಳುವದಕ್ಕೆ ಧರ್ಮನಿರ್ಬಂಧನೆಯುಂಟೆಂಬ ಮಾತನ್ನು ಸದ್ಧರ್ಮಿಗಳಾದ ನಿಮಗೆ ಹೇಳಲಿಕ್ಕೆ ಬೇಡ.''

''ಹೀಂಗೆದರೇನು? ಕೃಷ್ಣಸುಂದರೀ, ನನಗೆ ನಿನ್ನ ಮಾತಿನ ಅರ್ಥವಾಗಲೊಲ್ಲದು; ಚನ್ನಾಗಿ ಬಿಚ್ಚಿ ಹೇಳು ನೋಡುವಾ.'' ಎಂದು ಆತುರಮನಸ್ಕನಾಗಿ ವಿನಾಯಕದೇವನು ನುಡಿದೊಡನೆಯೇ ಕೃಷ್ಣಸುಂದರಿಯು:—

''ಆರ್ಯಾಂಗನೆಯರು ಒಮ್ಮೆ ಒಂದು ಸ್ಥಳದಲ್ಲಿ ಪ್ರೇಮಪಿಟ್ಟ ಮೇಲೆ ಆಯಿತು; ಕುಲಸತಿಯರ ಪ್ರೇಮವು ಮೇರುಗಿರಿಯಂತೆ ಅಚಲವಿರುವದು; ಗಂಗಾಜಲದಂತೆ ಪವಿತ್ರವಿರುವದು. ರಾಜಕುಮಾರರೇ, ನಾನು ಪರಸ್ತ್ರೀಯಿರುವೆನು. ಪರಸ್ತ್ರೀಯರನ್ನು ಹೆತ್ತವ್ವನಂತೆ ಮನ್ನಿಸುವದನ್ನು ಬಿಟ್ಟು ಹೀಗೆ ವಿಟಂಬಿಸುವದು ಸಚ್ಚರಿತ್ರರಾದ ನಿಮಗೆ ಯೋಗ್ಯವೆನಿಸುವದೆ?''

''ಏನು! ನೀನು ಪರಸ್ತ್ರೀಯೆ? ನೀನೀಗ ವಿವಾಹಿತಳಿರುವೆಯಾ?'' ಎಂದು ವಿಸ್ಮಯಚಕಿತನಾಗಿ ವಿನಾಯಕದೇವನು ಕೇಳಿದನು.

''ನಾನು ವಿವಾಹಿತಳಾಗಿರದಿದ್ದರೂ, ನನ್ನ ಪ್ರೇಮವು ಒಬ್ಬನಲ್ಲಿ ಕುಳಿತಿರುವದಾದ್ದರಿಂದ ನಾನು ಮನಸ್ಸಿನಿಂದ ವಿವಾಹಿತಳೇ ಆಗಿರುವೆನು. ಮಹಾರಾಜರೇ, ನಿಜವಾದ ಕಾರಣವು ಹೀಗಿದ್ದುದರಿಂದಲೇ, ನಿಮ್ಮ ಮನಸ್ಸು ನೋಯಿಸಬೇಕಾಯಿತು. ಅದಕ್ಕೆ ಉಪಾಯವಿಲ್ಲ.''

ಕೃಷ್ಣಸುಂದರಿಯ ಈ ಮಾತುಗಳನ್ನು ಕೇಳಿದ ಕೂಡಲೆ ವಿನಾಯಕದೇವನ ಮನಸ್ಸಿನ ಮೇಲೆ ಒಂದು ವಿಧವಾದ ಪರಿಣಾಮವುಂಟಾಯಿತು. ಪರವನಿತೆಯ ಹಂಬಲದಿಂದ ತನ್ನ ಸಚ್ಚರಿತ್ರೆಯನ್ನು ಕಲಂಕಮಯವಾಗಿ ಮಾಡಿದೆನೆಂದು ಅವನು ಖೆದಪಟ್ಟನು. ಆಗ ಅವನು ಪಶ್ಚಾತ್ತಾಪಯುಕ್ತನಾಗಿ:—

''ದೇವಿ! ಕುಮಾರಿಯೆಂದು ನಿನ್ನ ವ್ಯಾಮೋಹದಲ್ಲಿ ನಾನು ತೊಡಕಿದೆನು. ಇಷ್ಟು ದಿನಗಳ ವರೆಗೆ ನಿಜಸ್ಥಿತಿಯನ್ನು ಬಚ್ಚಿಟ್ಟು ನನ್ನನ್ನು ಚನ್ನಾಗಿ ಮೋಸ

ಗೊಳಿಸಿದೆ. ನೀನು ಹೀಗೆ ವಂಚನೆ ಮಾಡುವದಕ್ಕೆ ಕಾರಣವೇನಿತ್ತು?''

''ಮಹಾರಾಜರೇ, ನೀವು ನನ್ನ ಮೇಲೆ ದೋಷವೀಯಬೇಡಿರಿ. ನಾನು ಸಂಪೂರ್ಣ ನಿರ್ದೋಷಿಯಿರುವೆನು. ನನ್ನ ನಿಜವಾದ ಮನೋದಯವನ್ನು ಬಚ್ಚಿಡುವದಕ್ಕಾಗಿ ನಿಮ್ಮ ಸೇನಾಪತಿಗಳು ತಿಳಿಸಿದ್ದರಿಂದ ಹೀಗೆ ಮಾಡಬೇಕಾಯಿತು.''

''ಏನು! ವಿಕ್ರಮದೇವನು ನಿನಗೆ ಮೋಸಮಾಡುವದಕ್ಕೆ ಹೇಳಿದನೆ!''

''ಮೋಸವೆಂದು ನನಗೆ ತಿಳಿದಿದ್ದರೆ ನಾನು ಈ ಹವ್ಯಾಸಕ್ಕೆ ಬೀಳುತ್ತಿರಲಿಲ್ಲ. ಒಮ್ಮೆಲೆ ನಕಾರಾರ್ಥವಾದ ಉತ್ತರವನ್ನಿತ್ತರೆ, ಮಹಾರಾಜರ ಮನಸ್ಸಿಗೆ ಬಲವಾದ ಗಾಯವಾಗುತ್ತದಾದ್ದರಿಂದ ಕೆಲವು ದಿನಗಳವರೆಗೆ ನಿಜಸ್ಥಿತಿಯನ್ನು ತಿಳಿಸಬಾರದೆಂದು ಅವರು ನನಗೆ ತಿಳಿಸಿದ್ದರು. ಅವರ ಹೇಳಿಕೆಯು ಮೇರೆಗೆ ನಡೆಯುವದರಿಂದ ನಿಮ್ಮ ಹಿತವಾಗುವದೆಂದು ತಿಳಿದುಕೊಂಡಿದ್ದೆನು. ಇಂದು ನೀವು ಬಹಳೇ ನೊಂದುಕೊಳ್ಳತೊಡಗಿದ್ದರಿಂದ ನಿಮ್ಮನ್ನು ವರಿಸದಿರುವದಕ್ಕೆ ಕಾರಣವನ್ನು ತಿಳಿಸಬೇಕಾಯಿತು. ವಿಕ್ರಮದೇವನು ಅತ್ಯಂತ ಸ್ವಾರ್ಥಿಯೂ, ನೀಚನೂ ಇರುವನೆಂದೂ ನೀವು ಈ ವ್ಯಾಮೋಹದಲ್ಲಿ ತೊಡಕಿ ರಾಜಕಾರಣದ ಕಡೆಗೆ ದುರ್ಲಕ್ಷಿಸಬೇಕೆಂದೂ ಅವನ ಹಂಚಿಕೆ ಇರುತ್ತದಂತೆ! ಅವನು ಈ ಸಂಧಿಯಲ್ಲಿ ಬಾಮನೀ ಅರಸನನ್ನು ಇಲ್ಲಿಗೆ ಬರಮಾಡಿಕೊಂಡು ಅವನ ವಶಕ್ಕೆ ವೇಲಂಪಟ್ಟಣವನ್ನು ನಿರಾಯಾಸವಾಗಿ ಕೊಡುವದಕ್ಕೆ ಸಿದ್ಧನಾಗಿರುವನಂತೆ! ಅವನು ತೆಲಂಗಣದ ಅರಸೊತ್ತಿಗೆಗಾಗಿ ದೇಶದ್ರೋಹ, ಸ್ವಾಮಿದ್ರೋಹ ಮಾಡಲುದ್ಯುಕ್ತನಾಗಿರುವನೆಂದು ನನ್ನ ಓರ್ವ ಗೆಳತಿಯಿಂದ ತಿಳಿದದ್ದರಿಂದ ನಿಮ್ಮನ್ನು ಜಾಗ್ರತೆಪಡಿಸಿರುವೆನು. ರಾಮದೇವನ ಮೃತ್ಯುವಿಗೆ ಕಾರಣನಾದವನು ಅವನೇ!''

''ಕೃಷ್ಣಸುಂದರೀ, ವಿಕ್ರಮನು ಇಷ್ಟು ನೀಚನಾದನೇ!''

''ಹೌದು; ಮಹಾರಾಜರೆ, ಅವನ ನೀಚತನವು ಇಷ್ಟಕ್ಕೆ ಮುಗಿಯುವಂತಿಲ್ಲ. ರಾಮದೇವನ ಪತ್ನಿಯಾದ ವಿಮಲಾದೇವಿಯು ಪ್ರಾಪ್ತಿಗಾಗಿ ಅವನು ಸಾಹಸ ನಡೆಯಿಸಿರುವನು. ಆ ಸಾಧ್ವಿಯು ತನ್ನ ವಶವಾಗಬೇಕೆಂಬ ಉದ್ದೇಶದಿಂದ ಅವಳನ್ನು ಕಾರಾಗ್ರಹದಲ್ಲಿ ಹಾಕಿಸಿರುವನು. ಸೆರೆಮನೆಯಲ್ಲಿ ಹಾಕುವದಕ್ಕಿಂತ ಮೊದಲು ಈ ಸಂಗತಿಯನ್ನು ಅವಳು ನನಗೆ ತಿಳಿಸಿದ್ದಳು.''

''ಈ ಸಂಗತಿಯನ್ನು ಇಷ್ಟು ದಿನ ಬಚ್ಚಿಟ್ಟಿಯೇಕೆ?''

''ನಿನ್ನೆ ಅವಳು ನನ್ನೆದುರಿನಲ್ಲಿ ಹೇಳಿ ಹೋದಳು. ಅವಳನ್ನು ವಿಕ್ರಮದೇವನು ಇಂದೇ ಕಾರಾಗ್ರಹದಲ್ಲಿ ಹಾಕಿರುವನು. ನೀವಿಲ್ಲಿ ಬರದಿದ್ದರೂ ನಾನೇ ಇಂದು ನಿಮ್ಮ ಭೆಟ್ಟಿಯಾಗಿ ಎಲ್ಲ ಸಂಗತಿಗಳನ್ನು ಹೇಳುವವಳಿದ್ದೆನು.''

"ವಿಕ್ರಮನು ಕರಳಲ್ಲಿ ಕತ್ತರಿಯಾಡಿಸುವದಕ್ಕೆ ಪ್ರವೃತ್ತನಾದನೇ! ವಿಕ್ರಮಾ! ಇಂದು ನಿನ್ನ ನೂರು ವರ್ಷಗಳ ಆಯುಷ್ಯವು ತುಂಬಿತೆಂದು ತಿಳಿ!"

ಹೀಗೆ ವಿನಾಯಕದೇವನು ನುಡಿಯುವಷ್ಟರಲ್ಲಿ:—

"ವಿಕ್ರಮನ ಆಯುಷ್ಯವು ಮುಗಿದಿರುವದೋ, ವಿನಾಯಕನ ಆಯುಷ್ಯವು ಮುಗಿದಿರುವದೋ?" ಎಂದು ವಿಕ್ರಮದೇವನು ನುಡಿದು ಅಲ್ಲಿ ಪ್ರವೇಶಿಸುವಷ್ಟರಲ್ಲಿ —

"ಈರ್ವರ ಆಯುಷ್ಯವೂ ಮುಗಿದಿರುವದು!" ಎಂದು ಯಾರೋ ನುಡಿದಂತಾಯಿತು. ವಿನಾಯಕದೇವನು ವಿಕ್ರಮನನ್ನು ನೋಡಿ ಸಂತಪ್ತನಾಗಿ:-

"ಕುಲಾಂಗಾರಾ! ನೀನಿಷ್ಟು ಉನ್ಮತ್ತನಾದೆಯಾ! ಈಗಲೇ ನಿನಗೆ ತಕ್ಕ ಪ್ರಾಯಶ್ಚಿತ್ತವನ್ನು ಕೊಡುವೆನು!" ಎಂದು ವಿನಾಯಕದೇವನು ನುಡಿಯುವಷ್ಟರಲ್ಲಿ "ದೀನ! ದೀನ!!" ಎಂದು ಗರ್ಜಿಸುತ್ತ ಮುಸಲ್ಮಾನ ಸೈನಿಕರು ಅಲ್ಲಿಗೆ ಬಂದರು! ಕೂಡಲೆ ಅವರು ದುರ್ದೈವಿಯಾದ ರಾಜಕುಮಾರನನ್ನು ಬಂಧಿಸಿ ತಮ್ಮ ವಶಮಾಡಿಕೊಂಡು ಅಲ್ಲಿಂದ ತೆರಳಿದರು!

— — —

## ಪ್ರಾರಬ್ಧ ಪ್ರಹಾರ!

ಮಲಿಕಾಜಹಾನಳ ಉಪದೇಶವು ಮುಹಮ್ಮದಶಹನಿಗೆ ರುಚಿಸಲಿಲ್ಲ. ಸ್ವದೇಶಹಿತವಿಘಾತಕಿಯೂ, ಸ್ವಜನದ್ರೋಹಿಯೂ, ಸ್ವಾಮಿದ್ರೋಹಿಯೂ ಆದ ವಿಕ್ರಮನ ಸಹಾಯವು ಅವನಿಗಿದ್ದ ಮೇಲೆ ತೆಲಂಗಣದ ಮೇಲೆ ದಂಡೆತ್ತಿ ಹೋಗುವದಕ್ಕೆ ಹಿಂದುಮುಂದು ನೋಡುವನೆ? ಅವನು ಅಪರಿಮಿತ ಸೈನ್ಯದೊಂದಿಗೆ ಹೊರಟು ವೇಲಂಪಟ್ಟಣಕ್ಕೆ ಬಂದನು. ಮುಂದಾಗಿ ಯೋಚಿಸಿದ ಮೇರೆಗೆ ವಿಕ್ರಮನು ಅವನ ಸೈನ್ಯವನ್ನು ನಿರಾತಂಕವಾಗಿ ಕೋಟೆಯಲ್ಲಿ ತೆಗೆದುಕೊಂಡನು! ಆ ಮೇಲೆ ಅವನು ವಿನಾಯಕದೇವನನ್ನು ಶೋಧಿಸುತ್ತ ಕೃಷ್ಣಸುಂದರಿಯ ಮಂದಿರವನ್ನು ಪ್ರವೇಶಿಸಿದ ಕೂಡಲೆ, ಮುಸಲ್ಮಾನ ಸೈನಿಕರು ಅವನನ್ನು ಹಿಂಬಾಲಿಸಿ ಬಂದು ದುರ್ದೈವಿಯಾದ ರಾಜಕುಮಾರನನ್ನು ಸೆರೆ ಹಿಡಿದರು!

ಅಸಂಖ್ಯವಾದ ಪ್ರಾಣಾಹುತಿಯಿಂದ ಆಗದಷ್ಟು ಕಾರ್ಯವು ಗೃಹಭೇದಿಯಾದ ವಿಕ್ರಮನ ಸಹಾಯದಿಂದ ಎಷ್ಟೂ ರಕ್ತಪಾತವಿಲ್ಲದೆ ನೆರವೇರಿತು. ಮುಹಮ್ಮದಶಹನು ತೆಲಂಗಣದ ರಾಜಸಿಂಹಾಸನದಲ್ಲಿ ವಿರಾಜಮಾನನಾದನು. ಅವನೆದುರಿನಲ್ಲಿ ರಾಜಕುಮಾರನಾದ ವಿನಾಯಕದೇವನು ಒಬ್ಬ ಸಾಮಾನ್ಯ ಅಪರಾಧಿಯಂತೆ ನಿಲ್ಲಿಸಲ್ಪಟ್ಟಿದ್ದನು. ಆಗ ಶಹನು —

"ವಿನಾಯಕದೇವಾ! ನೀನು ನಮ್ಮ ದ್ರೋಹಚಿಂತನೆ ಮಾಡಿದ್ದರ ಫಲ ವಿದು! ನೀನು ನಿನ್ನ ಪ್ರಜೆಗಳಿಗೆ ಬಾಮನೀ ನಾಣ್ಯಗಳನ್ನು ಕರಗಿಸುವದಕ್ಕೆ ಹೇಳಿ ದಾಗಲೆ ನಿನ್ನ ರಾಜ್ಯವನ್ನು ತೆಗೆದುಕೊಳ್ಳಬೇಕಾಗಿತ್ತು! ಆಗ ದೊಡ್ಡ ಮನಸ್ಸು ಮಾಡಿದ್ದರಿಂದ ನೀನು ಮೈಮೇಲೆ ಒಂದು, ಕಾರವಾನರು ನಮ್ಮ ಕಡೆಗೆ ತರು ತ್ತಿದ್ದ ಕುದುರೆಗಳನ್ನು ಅಪಹರಿಸಿದೆ! ನೀನು ಹೀಗೆ ಉನ್ಮತ್ತನಾಗಿ ನಡೆದದ್ದಕ್ಕೆ ಯೋಗ್ಯ ಶಾಸನವನ್ನು ವಿಧಿಸದಿದ್ದಗೆ ಗತ್ಯಂತರವಿಲ್ಲ. ನಿನಗೆ ದೇಹಾಂತ ಶಾಸ ನವೇ ಯೋಗ್ಯ ಪ್ರಾಯಶ್ಚಿತ್ತವು!"

"ಮಹಮ್ಮದಾ! ನಿನ್ನ ಶಾಸನಕ್ಕೆ ಅಂಜುವ-ಅಳಕುವ ಅಳ್ಳದೆಯವನು ನಾನಲ್ಲ! ಗೃಹಭೇದಿಗಳೂ, ನೀಚಸ್ವಾರ್ಥಿಗಳೂ ಆದ ವಿಕ್ರಮದೇವನಂತಹ ಕುಲಾಂಗಾರರ ದುಷ್ಕೃತಿಗಳನ್ನು ನೋಡಿ ನನಗೆ ಬಹಳೇ ವ್ಯಥೆಯಾಗಿದೆ! ಇಂತಹ ಚಾಂಡಾಲವೃತ್ತಿಯ ಜನರ ನೆರವಿನಿಂದಲೇ ಯವನರಾದ ನಿಮ್ಮ ಉಪ ಟಳವು ದೇಶದಲ್ಲಿ ಯಥೇಷ್ಟವಾಗಿ ನಡೆದದೆ!"

"ವಿನಾಯಕದೇವಾ! ನೀನಂತೂ ರಾಜ್ಯಕ್ಕೆ ಎರವಾದೆ! ಕೃತಾಪರಾಧದ ಬಗ್ಗೆ ಕ್ಷಮೆ ಬೇಡದಿದ್ದರೆ ನಿಜವಾಗಿ ಜೀವಕ್ಕೆ ಎರವಾಗುವೆ!" ಎಂದು ನುಡಿದು ಮಹಮ್ಮದಶಹನು ಆಥ್ಯತೆಯಿಂದ;—

"ಇಲ್ಲದ ಉಸಾಬರಿಯನ್ನು ಬಿಟ್ಟು ಕ್ಷಮೆಯನ್ನು ಯಾಚಿಸಿದರೆ ಜೀವ ದಾನ ಕೊಡುವೆನು."

"ಏನು? ಕ್ಷಮೆಯನ್ನು ಬೇಡಬೇಕೆ? ಈ ವೀರ ಕ್ಷತ್ರಿಯನು ನಿನ್ನಂತಹ ನೀಚ ಮ್ಲೇಂಛನಲ್ಲಿ ಕ್ಷಮೆಯನ್ನು ಯಾಚಿಸಬೇಕೆ? ಅಸಂಭವವು! ಈ ಮಾತು ನನ್ನಿಂದಾಗುವದು ತೀರ ಅಸಂಭವವು!" ಎಂದು ವಿನಾಯಕದೇವನು ಕಠೋರ ತನದಿಂದ ನುಡಿದು:—

"ನರಾಧಮಾ, ನೀಚವೃತ್ತಿಯಿಂದ ಕಪಟಕಾರಸ್ಥಾನಗಳನ್ನು ಮಾಡಿ, ನನ್ನನ್ನು ಪರಾಧೀನ ಮಾಡಿರುವೆಯೆಂಬದೇನೋ ನಿಜ; ಆದರೆ ನಿನ್ನಂತಹ ಹೀನ ಕೋಟಿಯವನಿಗೆ ಕ್ಷಮೆಯನ್ನು ಬೇಡುವಂತಹ ಸ್ವಾಭಿಮಾನ ಶೂನ್ಯನು ನಾನಿರು ವದಿಲ್ಲ!"

ಹೀಗೆ ವಿನಾಯಕದೇವನು ನುಡಿಯುವಷ್ಟರಲ್ಲಿ ಓಲಗದಲ್ಲಿ ಒಂದು ವ್ಯಕ್ತಿಯು ಪ್ರವೇಶಿಸಿತು. ಅದರ ಮುಖವು ಬಳ್ಳಿಯ ಸಂತಪ್ತವಾಗಿತ್ತು. ಅದು ನೆರೆದ ಜನರನ್ನೂ ಮಹಮ್ಮದಶಹನನ್ನೂ, ವಿನಾಯಕದೇವನನ್ನೂ ಉದ್ದೇಶಿಸಿ:—

"ಮಹಾರಾಜರೆ', ಬಾಮನೀ ಬಾದಶಹರೇ, ಸಭ್ಯಗೃಹಸ್ಥರೇ, ಮೊದಲು ನಿಜವಾದ ಅಪರಾಧಿಗಳಿಗೆ ಶಾಸನವು ವಿಧಿಸಲ್ಪಡಬೇಕು. ರಾಷ್ಟ್ರದ ನಿಜವಾದ

ಹಾನಿಯನ್ನುಂಟುಮಾಡಿ ತನ್ನ ಅಲ್ಪ ಲಾಭವನ್ನು ಸಾಧಿಸುವ ನರಿಗೆ ದೇಹಾಂತಶಾಸನ ದೊರೆಯುವದು ಯುಕ್ತವಾದದ್ದು. ಯಾವ ನರಾಧಮನು ಓರ್ವ ಸಾಧ್ವಿಯ ಪ್ರಾಪ್ತಿಗಾಗಿ ಅವಳ ಪತಿಯನ್ನು ಮೃತ್ಯುಮುಖದಲ್ಲಿ ಕೆಡಹಿದನೋ, ಯಾವ ನೀಚನು ಯಾವದೊಂದು ಜಹಾಗೀರಿಯ ಪ್ರಾಪ್ತಿಗಾಗಿ ಇಲ್ಲವೆ ಅರಸೊತ್ತಿಗೆಯ ಲಾಲಸೆಯಿಂದ ಅತ್ಯಂತ ಘೋರವಾದ ಸ್ವಾಮಿದ್ರೋಹವನ್ನು ಮಾಡಿದನೋ ಅಂತಹನಿಗೆ ಮೊದಲು ಶಾಸನವು ವಿಧಿಸಲ್ಪಡಬೇಕು!'' ಎಂದು ಆ ವ್ಯಕ್ತಿಯು ನುಡಿದು, ವಿದ್ಯುತ್ತಿನಂತೆ ಬಳ್ಳಿಯ ಚಪಲತೆಯಿಂದ ಹಾರಿ ಹೋಗಿ, ವಿಕ್ರಮದೇವನ ಹೃದಯದಲ್ಲಿ ತನ್ನ ಕೈಯೊಳಗಿನ ಅತ್ಯಂತ ತೀಕ್ಷ್ಣವಾದ ಖಡ್ಗವನ್ನು ಚುಚ್ಚಿತು! ಕೂಡಲೆ ವಿಕ್ರಮದೇವನು:—

''ಸತ್ತೆ! ಸತ್ತೆ!!'' ಎಂದು ಚೀರುತ್ತಾ ನೆಲಕ್ಕೆ ಬಿದ್ದು, ಗತಾಸುವಾದನು! ಆಗ ಆ ವ್ಯಕ್ತಿಯು ಆನಂದೋನ್ಮತ್ತವಾಗಿ:—

''ನನ್ನ ಪ್ರತಿಜ್ಞೆಯು ಪೂರ್ತಿಯಾಯಿತು!'' ಎಂದು ನುಡಿದು, ಅದೇ ಖಡ್ಗವನ್ನು ತನ್ನ ಹೃದಯಮಂದಿರದಲ್ಲಿ ಬಲವಾಗಿ ಚುಚ್ಚಿಕೊಂಡಿತು!!

ವಾಚಕಮಹಾಶಯರೇ, ಆ ವ್ಯಕ್ತಿಯು ಮತ್ತಾರೂ ಆಗಿರದೆ, ರಾಮದೇವನ ಪತ್ನಿಯಾದ ವೀರ ವಿಮಲಾದೇವಿಯೇ ಆಗಿದ್ದಳು. ಯವನ ಸೈನಿಕರು ರಾಜಧಾನಿಯನ್ನು ಪ್ರವೇಶಿಸಿದ ಕೂಡಲೆ ವಿಲಕ್ಷಣವಾದ ಗೊಂದಲವೆದ್ದಿತು. ಆ ಸಂಧಿಯನ್ನು ಸಾಧಿಸಿ ಅವಳು ಕಾರಾಗೃಹದಿಂದ ಮುಕ್ತಳಾಗಿದ್ದಳು.

ಇಷ್ಟೆಲ್ಲ ಕಾರ್ಯಗಳು ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ನೆರವೇರಿತು. ಸರ್ವರೂ ಚಿತ್ರದಲ್ಲಿಯ ಗೊಂಬೆಗಳಂತೆ ಸ್ತಬ್ಧರಾಗಿ ಕುಳಿತು ಬಿಟ್ಟಿದ್ದರು. ವಿನಾಯಕದೇವನು ಈ ದೃಶ್ಯವನ್ನು ನೋಡಿದೊಡನೆಯೇ:—

''ಮಹಮ್ಮದಾ! ನೋಡಿದೆಯಾ, ಪರಮಾತ್ಮನು ಅನ್ಯಾಯಕ್ಕೆ ಹೇಗೆ ಶಾಸನ ಮಾಡುತ್ತಿರುವನೆಂಬುದನ್ನು ನೋಡಿದೆಯಾ? ನೀನು ನೀಚತನದಿಂದ ವಿಕ್ರಮನನ್ನು ಒಳಮಾಡಿಕೊಂಡು, ನಿರಪರಾಧಿಯಾದ ನನ್ನನ್ನು ಕೊಲೆ ಮಾಡಬೇಕೆಂಬ ಆಸುರೀಭಾವವನ್ನು ತಳೆದಿರುವೆ! ನಾನು ಮರಣಕ್ಕೆ ತಿಲಾಂಶವೂ ಅಂಜುವದಿಲ್ಲ. ಕ್ಷತ್ರಿಯವೀರರು ಮೃತ್ಯುದೇವತೆಯ ಆತಿಥ್ಯವನ್ನು ಕೈಕೊಳ್ಳುವ ಕಾರ್ಯದಲ್ಲಿ ಬಳ್ಳಿಯ ಉತ್ಸಾಹಿಗಳಿರುವರೆಂಬ ಮಾತು ಮ್ಲೇಂಛನಾದ ನಿನಗೆ ಹೇಗೆ ತಿಳಿಯಬೇಕು? ಜಗತ್ತಿನಲ್ಲಿ ಅನ್ಯಾಯವು ಕಡೆಗಾಣುತ್ತಿರುವದಿಲ್ಲ. ನ್ಯಾಯಪಕ್ಷಪಾತಿಯಾದ ಪರಮಾತ್ಮನು ಅನ್ಯಾಯದ ಪರಿಮಾರ್ಜನೆ ಮಾಡದಿರನು. ವಿಕ್ರಮನು ಕರ್ಮಕ್ಕೆ ತಕ್ಕ ಫಲವನ್ನು ಹೇಗೆ ಭೋಗಿಸಿದನೆಂಬದು ಪ್ರತ್ಯಕ್ಷವಾಗಿ ಕಂಡ ಮಾತಾಗಿದೆ. ಮದಾಂಧ ಮಹಮ್ಮದಾ!

ಕ್ಷಮೆಯನ್ನು ಯಾಚಿಸಿ, ಬದುಕುವದಕ್ಕಿಂತ ಮರಣಹೊಂದುವದರಲ್ಲಿ ಸ್ವಾಭಿಮಾನಿಯಾದ ನನಗೆ ಆನಂದವೆನಿಸುತ್ತದೆ!'' ಎಂದು ವೀರಾವೇಶದಿಂದ ವಿನಾಯಕದೇವನು ನುಡಿದ ಕೂಡಲೆ ಮಹಮ್ಮದಶಹನ ಆಸುರೀಹೃದಯವು ಒಮ್ಮೆಲೆ ಜಾಗೃತವಾಯಿತು. ಅವನು ಕೂಡಲೆ ತನ್ನ ಸೈನಿಕರನ್ನುದ್ದೇಶಿಸಿ: —

'ಈ ಉನ್ಮತ್ತನನ್ನು ಅನೇಕ ವಿಧದಿಂದ ಯಾತನೆಗೊಳಿಸಿ ಕೊಲೆ ಮಾಡಿರಿ!' ಎಂದು ಉದ್ಗಾರ ತೆಗೆದನು!

ದುರ್ದೈವಿಯಾದ ಆ ರಾಜಕುಮಾರನನ್ನು ಅನೇಕ ಒಗೆಯ ಕ್ರೂರತನದ ಕೃತಿಗಳಿಂದ ಮಹಮ್ಮದಶಹನು ಕೊಲ್ಲಿಸಿದನು! ವಿನಾಯಕದೇವನ ಪ್ರಾಣೋತ್ಕ್ರಮಣವಾಗುತ್ತಲೆ ರಾಜಧಾನಿಯಲ್ಲಿ ''ಜಯ ಭುವನೇಶ್ವರೀ! ಜಯ ವಿದ್ಯಾರಣ್ಯ! ಜಯ ಕರ್ನಾಟಕಾಂಬೆ!'' ಎಂಬ ವೀರಾವೇಶದ ಘೋರಧ್ವನಿಯು ಕೇಳತೊಡಗಿತು! ಕೂಡಲೆ ಮಹಮ್ಮದಶಹನು ಭಯಗೊಂಡು: — ''ಕಾಫರರು ಬಂದರು! ಹೂಂ! ಸೈನ್ಯವನ್ನು ಸಿದ್ಧಪಡಿಸು!'' ಎಂದು ಸೇನಾಪತಿಗೆ ಆಜ್ಞಾಪಿಸಿ, ಒಲಗದಿಂದ ಹೊರಬಿದ್ದನು. ಅಷ್ಟರಲ್ಲಿ ವೀರ ಕನ್ನಡಿಗರು ವೀರಧ್ವನಿಗೈಯುತ್ತ ಯವನ ಸೈನಿಕರನ್ನು ಮುತ್ತಿಬಿಟ್ಟಿದ್ದರು!

ತೆಲಂಗಣದ ಮೇಲೆ ಮಹಮ್ಮದಶಹನು ದಂಡೆತ್ತಿ ಹೋದ ವಾರ್ತೆಯನ್ನು ಬುಕ್ಕರಾಯನು ಕೇಳಿ, ವಿನಾಯಕದೇವನ ಸಹಾಯಕ್ಕಾಗಿ ಸೈನ್ಯವನ್ನು ಕಳುಹಿಸಿದ್ದನು. ವಿನಾಯಕದೇವನ ಪ್ರಾರಬ್ಧಪ್ರಹಾರದಿಂದ ಆ ಸೈನ್ಯವು ವೇಳೆಗೆ ಬಂದೊದಗಲಿಲ್ಲ! ಸೈನ್ಯವು ಒಂದು ಗಳಿಗೆ ಮುಂಚಿತವಾಗಿ ಬಂದಿದ್ದರೆ, ರಾಜಕುಮಾರನ ಕೊಲೆಯಾಗುತ್ತಿರಲಿಲ್ಲ! ಪ್ರಾರಬ್ಧಪ್ರಹಾರವನ್ನು ತಪ್ಪಿಸಿಕೊಂಡವರಾರು?

ವೀರ ಕನ್ನಡಿಗರ ಹೊಡತಕ್ಕೆ ಬಾಮನೀ ಸೈನ್ಯವು ದಿಕ್ಕುಪಾಲಾಗಿ ಓಡಿಹೋಯಿತು. ಈ ಭಯಂಕರವಾದ ಗಂಡಾಂತರದಿಂದ ಜೀವವನ್ನು ಉಳಿಸಿಕೊಂಡು ಪಾರಾಗಬೇಕಾದರೆ ಮಹಮ್ಮದಶಹನಿಗೆ ಸಾಕುಸಾಕಾಗಿ ಹೋಯಿತು!

— — —

# ಸಂಪೂರ್ಣ.

हे पुस्तक मि. प. काळे, यांनी आनंदवन-अगडि येथील आपल्या श्री शेषाचल छापखान्यांत छापिलें.